31–10–1988 ರನ್ವಯ ಮತ್ತು ಡಬ್ಲ್ಯೂಆರ್‌ಡಿ : 101 : ಎಂಬಿಐ : 2001 ದಿನಾಂಕ : 24–12–2001 ರಗಳನ್ವಯ ವಿನಾಯ್ತಿ ನೀಡಲಾಗಿದೆ.

9. ನದಿಯಿಂದ ನೀರನ್ನು ಎತ್ತುವ ವ್ಯವಸ್ಥೆಯನ್ನು ಮತ್ತು ನೀರಿನ ಪ್ರಮಾಣವನ್ನು ಸೂಕ್ತ ರೀತಿಯಲ್ಲಿ ಅಳತೆ ಮಾಡುವ ಸಲುವಾಗಿ ಅಗತ್ಯ ಮಾಪನಗಳನ್ನು ಮಂಡಳಿಯು ತಮ್ಮ ಸ್ವಂತ ಖರ್ಚಿನಲ್ಲಿಯೇ ಅಳವಡಿಸಿಕೊಳ್ಳತಕ್ಕದ್ದು ;
10. ಯಾವುದೇ ಕಾರಣದಿಂದ ನೀರನ್ನು ಜಲಸಂಪನ್ಮೂಲ ಇಲಾಖೆಯು ನೀಡಲು ಸಾಧ್ಯವಾಗದಿದ್ದ ಪಕ್ಷದಲ್ಲಿ ಉಂಟಾಗಬಹುದಾದ ತೊಂದರೆಗಳಿಗೆ ಸರ್ಕಾರವು ಜವಾಬ್ದಾರಿಯಾಗುವುದಿಲ್ಲ ;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 731 Exp-9 : 2010, ದಿನಾಂಕ : 27–10–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ. ಆರ್. 14

## INFRASTRUCTURE DEVELOPMENT SECRETARIAT

**Sub:** Sharing of cost in construction of Tumkur-Rayadurga New Railway line

**Preamble :-**

1. Railways are one of the most convenient and widely used means of travel in India and also a very critical component in logistics. The use of rail network for freight and passenger transport would reduce congestion on roads, improve safety and reduce environmental impacts. The development of railways in Karnataka has suffered due to certain geographical limitations.

2. Tumkur is a District head quarters in the State of Karnataka. It is situated at one and half hour drive from Bangalore, the capital of Karnataka. The existing railheads at Rayadurga and Tumkur has been selected to be linked via Kalyanadurga, which is located in Andhra Pradesh and Karnataka State respectively. The existing BG line connecting Rayadurga with Tumkur takes a round about route via Chitradurga, Chickjajur, Birur and Arasikere convering a distance of 355 Kms. The proposed railway line between Rayadurga and Tumkur, via Kalyanadurga, Pavagada, Madakasira, Mdhugiri and Koratagere will cover a distance of 207.65 kms. Thus saving a distance of around 140 kms between Rayadurga-Chennai. The proposed new BG line will serve extensively for Tumkur in Karnataka.

3. This line is important for the socio-economic development of the region and the State. Therefore, the Railway has requested Government of Karnataka for sharing the cost of construction of the above new line project. Accordingly it is proposed to take up the construction of new BG line between Tumkur-Rayadurga via Kalyanadurga (207.65 Kms centre to centre of stations). Total cost of the project is estimated to be 1027.89 cr ; the length of the project in Karnataka is 102.63 Kms. The cost of the project in Karnataka is Rs. 479.59 crores.

4. Considering the importance of the project the State Govenrment has decided to take up this railway project on 50 : 50 cost sharing basis between Railway and Govt. Karnataka, only in respect of Railway line within Karnataka State. The proportionate cost is Rs. 239.80 crores for Karnataka.

5. Hence this Order.

**GOVERNMENT ORDER NO: IDD 82 NSW 2009, BANGALORE DATED; 9-12-2010**

In the circumstances explained in the preamble, sanction of the State Government is hereby accorded for the following :-

(i) To take up Tumkur-Rayadurga railway project on 50 : 50 cost sharing basis between Government of Karnataka and Ministry of Railways. The length of the project in Karnataka is 102.63 Kms and the cost of the same is Rs. 479.59 crores for the development of railway line only.
(ii) To share 50% cost of this project cost (i.e. about Rs. 239.80 crores) by the State Government.
(iii) To request the Railways to complete this project in the next 3-5 years.

This Order issues with concurrence of F.D. vide U.O. Note No. FD 1590 Exp-1/2010, dated 2-9-2010.

By Order and in the name of the Governor of Karnataka,
**C.A. Baburavindranath Patel**
Under Secretary to Govt.
Infrastructure Development Department.

P.R. 15

## INFRASTRUCTURE DEVELOPMENT SECRETARIAT

**Sub :** Construction of new Railway line between Kaduru-sakaleshpura via Chikmagalur.

**Read :**
1. GO No. IDD 35 NSW 09, dt. 24-4-2009.
2. GO No. IDD 29 NSW 10 dt. 1-6-2010
3. Letter No. W63/CN/BNC/MR/B/GL dt. 17-9-2010, from Dy.CE/CCN/SWR, Bangalore.

**Preamble :-**

1. In G.O. read at (1) above, Government of Karnataka decided to take up the balance work of Kaduru-Sakaleshpura (via-Chikmagalur) railway project on (50 : 50 sharing between GoK & Railway). This project was sanctioned during April 1999 and the total

length of the project is 93 kms & cost of the project is Rs. 256.17 crore. The expenditure so far is Rs. 82.28 crore, the project is being taken up from 2010-11 onwards on cost sharing basis between railways and GoK from 2010-11.

2. In the G.O. read at Sl.No. (2) above the State Government has released an amount of Rs. 5.00 crore towards the share of the State Government for Kaduru-sakaleshpura via Chikmagalur railways project.

3. The Chief Engineer, South Western Railway, Bangalore in this letter read at Sl. No. (3) above, has requested to GoK deposited only Rs. 5.00 crores which is already exhausted. Balance to be deposited without further loss of time.

4. The proposal of Railways has been examined and it has been decided to release an amount of Rs. 10.00 crore (Rupees Ten crore only) out of the Budget of Rs. 272.50 crore provided under the Head of Account " 5465-01-190-3-05" (Plan) 211 investment towards cost sharing for new railway projects during 2010-11.

5. Hence this Order.

**GOVERNMENT ORDER NO: IDD 29 NSW 2010, BANGALORE DATED; 4-12-2010**

After careful examination of the request of Railways, Government is pleased to under take the balance project work Kaduru-sakaleshpura via Chikmagalur on 50 : 50 cost sharing basis and to release an amount of Rs. 10.00 crore (Rupees Ten Crore only) being the part of the share GoK.

2. The expenditure shall be met under the Head of Account **"5465-01-190-3-05"** (Plan) 211 investment out of the budget provision Rs. 272.50 crore. Towards cost sharing for new railways projects during 2010-11.

3. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

4. This order is issued in accordance with the concurrence of Finance Department given vide U.O. Note. No. FD 1814 Exp-1/2010 dated 20-11-2010.

By Order and in the name of the Governor of Karnataka,

**C.A. Baburavindranath Patel**

Under Secretary to Govt.

Infrastructure Development Department.

P.R. 16

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್.ಹೆಚ್.ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆಯಡಿ ನೀಡಿರುವ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ : 08–09–2009ರ ಆದೇಶ ಸಂಖ್ಯೆ : ಸಿಆಸುಇ 064 ಕೆಇವಿ 07.
2. ಆಯುಕ್ತರು, ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರ ಪತ್ರ ಸಂಖ್ಯೆ : ಮವ್ಯ : ಭೂಸ್ವಾ : ಇಎಸ್‌ಟಿ : ಸಿಆರ್ : 144 : 01–02 : 4340, ದಿನಾಂಕ : 10–03–10.
3. ದಿನಾಂಕ : 19–04–2010ರ ಆದೇಶ ಸಂಖ್ಯೆ : ಸಿಆಸುಇ 280 ಕೆಇವಿ 07.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ, ಶ್ರೀ ಎನ್.ಹೆಚ್.ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ), ಅಧಿಕಾರಿ, ಇವರು ಈ ಹಿಂದೆ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ಕಛೇರಿಯಲ್ಲಿ ಭೂ ಸಂತ್ರಸ್ತರಿಗೆ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ ವಿನಾಯತಿಗಾಗಿ ನೀಡುವ ನಮೂನೆ–1 ರ ನಕಲಿ ಪ್ರಮಾಣ ಪತ್ರಗಳನ್ನು ನೀಡಿದ್ದು, ಈ ನಕಲಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ ವಿನಾಯ್ತಿ ಪಡೆಯುವ ಮೂಲಕ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟಕ್ಕೆ ಸಂಬಂಧಿಸಿದಂತೆ ಶ್ರೀ ಸೂಳೇಭಾವಿ ಹಾಗೂ ಇತರರ ವಿರುದ್ಧ ಜಮಖಂಡಿ ಪೊಲೀಸ್ ಠಾಣೆಯಲ್ಲಿ ದಾಖಲಿಸಲಾದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 27/2001 ರ ವಿರುದ್ಧ ಶ್ರೀ ಎನ್. ಹೆಚ್. ಸೂಳೇಭಾವಿ ರವರು ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 12985/01 (GM-RES) ರಲ್ಲಿ ಪ್ರಕರಣ ದಾಖಲಿಸಿದ್ದು, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 27/2001 ಅನ್ನು ರದ್ದುಪಡಿಸಿ ಮಾನ್ಯ ಉಚ್ಚ ನ್ಯಾಯಾಲಯವು ಆದೇಶಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀ ಸೂಳೇಭಾವಿ ರವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆ, 1973 ರ ಕಲಂ 197ರ ಪ್ರಕಾರ ಸಕ್ಷಮ ಪ್ರಾಧಿಕಾರದ ಅಭಿಯೋಜನಾ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ, ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಮೇಲೆ ಮೇಲ್ಮನವಿ ಸಲ್ಲಿಸದಿರುವುದರಿಂದ ಹಾಗೂ ಮೇಲ್ಕಂಡ ಆರೋಪಕ್ಕೆ ಸಂಬಂಧಿಸಿದಂತೆ ಜಂಟೀ ಇಲಾಖಾ ವಿಚಾರಣೆಗೆ ಆದೇಶಿಸಿರುವುದರಿಂದ ಶ್ರೀ ಸೂಳೇಭಾವಿ ರವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸುವ ಆದೇಶವನ್ನು ಮರುಪರಿಶೀಲಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಶ್ರೀ ಎನ್.ಹೆಚ್. ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ) ಇವರು ಈ ಹಿಂದೆ ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ ಜಮಖಂಡಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಇವರು ಹಾಗೂ ಇತರರು ಮುದ್ರಾಂಕ ಶುಲ್ಕ ವಿನಾಯಿತಿ ಪಡೆಯಲು ಸಂತ್ರಸ್ತರಿಗೆ ನೀಡಲಾದ ಪ್ರಮಾಣ ಪತ್ರಗಳಲ್ಲಿ ಕಟ್ಟಡಗಳ ಮೌಲ್ಯಕ್ಕಿಂತ ಹೆಚ್ಚು ಮೌಲ್ಯ ನಮೂದಿಸಿ ಪ್ರಮಾಣ ಪತ್ರ ನೀಡಿರುವುದರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ಇವರುಗಳ ವಿರುದ್ಧ ನಡೆಸಲಾದ ಜಂಟೀ ಇಲಾಖಾ

ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗದ ಕಾರಣ, ಶ್ರೀ ಎನ್.ಹೆಚ್. ಸೂಳೇಭಾವಿ ಹಾಗೂ ಇತರರನ್ನು ದೋಷಮುಕ್ತಗೊಳಿಸಿ ಆದೇಶ ಹೊರಡಿಸಲಾಗಿದೆ.

ಇಲಾಖಾ ವಿಚಾರಣೆಯಲ್ಲಿ ಶ್ರೀ ಸೂಳೇಭಾವಿ ರವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದರಿಂದ ಮತ್ತು ಇದೇ ಆರೋಪಗಳಿಗೆ ಸಂಬಂಧಿಸಿದಂತೆ ಕ್ರಿಮಿನಲ್ ಮೊಕದ್ದಮೆಯಲ್ಲಿ ಸರ್ಕಾರದ ಪರವಾಗಿ ಆರೋಪಗಳನ್ನು ರುಜುವಾತುಪಡಿಸುವುದು ಕಷ್ಟಸಾಧ್ಯವಾದ ಕಾರಣ, ಸರ್ಕಾರವು, ಆಯುಕ್ತರು, ಕೃಷ್ಣ ಮೇಲ್ದಂಡೆ ಯೋಜನೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 064 ಕೆಇವಿ 07, ಬೆಂಗಳೂರು, ದಿನಾಂಕ : 10ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಎನ್.ಹೆಚ್.ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ), ಅಧಿಕಾರಿ, ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ, (ಪ್ರಸ್ತುತ ವಿಶೇಷ ಭೂಸ್ವಧೀನಾಧಿಕಾರಿ, ಹಿಡಕಲ್ ಡ್ಯಾಂ, ಬೆಳಗಾವಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರನ್ನು ದಂಡ ಪ್ರಕ್ರಿಯಾ ಸಂಹಿತೆ, 1973ರ ಕಲಂ 197ರ ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ದಿನಾಂಕ : 08-09-09ರ ಆದೇಶ ಸಂಖ್ಯೆ : ಸಿಆಸುಇ 064 ಕೆಇವಿ 07 ರಲ್ಲಿ ನೀಡಲಾಗಿದ್ದ ಸಕ್ಷಮ ಪ್ರಾಧಿಕಾರದ ಅಭಿಯೋಜನಾ ಮಂಜೂರಾತಿಯನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಾಸುದೇವಮೂರ್ತಿ**

ಪಿ.ಆರ್. 17

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ(ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ.ಎಂ.ಗೌಣಿ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ಶ್ರೀ ಓಬಣ್ಣ, ಶ್ರೀ ಶ್ರೀನಿವಾಸಾಚಾರಿ ಮತ್ತು ಶ್ರೀ ವಸಂತ ಮಾಧವ ರವರನ್ನು ವಿಚಾರಣೆಯಿಂದ ಕೈಬಿಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ದಿನಾಂಕ : 29-08-2006ರ ಸರ್ಕಾರಿ ಪತ್ರ ಸಂಖ್ಯೆ : ಸಿಆಸುಇ 056 ಎಸ್‌ಇಎನ್ 98.
2. ದಿನಾಂಕ : 21-03-2007ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 056 ಎಸ್‌ಇಎನ್ 98.
3. ದಿನಾಂಕ : 09-07-2010ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 014 ಕೆಇವಿ 07.
4. (a) ಶ್ರೀ ಓಬಣ್ಣ ಇವರ ಮನವಿ ದಿನಾಂಕ : 24-07-10 (b) ಶ್ರೀ ಶ್ರೀನಿವಾಸಾಚಾರಿ ಇವರ ಮನವಿ ದಿನಾಂಕ : 24-07-10 ಮತ್ತು (c) ಶ್ರೀ ವಸಂತ ಮಾಧವ ಇವರ ಮನವಿ ದಿನಾಂಕ : 24-07-10.
5. ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಗಂಗಾವತಿ ಇವರ ದಿನಾಂಕ : 31-07-10ರ ವರದಿ ಸಂಖ್ಯೆ : ಸಿಬ್ಬಂದಿ/09/2007-09.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕಛೇರಿಯಲ್ಲಿ ಈ ಹಿಂದೆ ಶ್ರೀ ಎ.ಎಂ.ಗೌಣಿ ಮತ್ತು ಶ್ರೀ ಜೆ. ತಿಮ್ಮಯ್ಯ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಗಳು ತಹಶೀಲ್ದಾರರ ಹುದ್ದೆಯಲ್ಲಿ, ಶ್ರೀ ಓಬಣ್ಣ ಮತ್ತು ಶ್ರೀ ಎನ್. ಶರಣಪ್ಪ, ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ, ಶ್ರೀ ಎನ್.ಕೆ.ರಂಗಯ್ಯ, ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ, ಶ್ರೀ ಶ್ರೀನಿವಾಸಾಚಾರಿ ಮತ್ತು ಶ್ರೀ ವಸಂತಮಾಧವ, ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಮತ್ತು ಶ್ರೀ ಡಿ. ವೆಂಕಟೇಶ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, 1981-82 ನೇ ಸಾಲಿನಲ್ಲಿ ಸರ್ಕಾರಿ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳನ್ನು ಉಲ್ಲಂಘಿಸಿ ಮಂಜೂರು ಮಾಡಿರುವ ಆರೋಪ ಕುರಿತು, ಇವರುಗಳ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11-ಎ ರಡಿ ಆರೋಪ ಪಟ್ಟಿಯನ್ನು ಸಿದ್ದಗೊಳಿಸಿ, ಗ್ರೂಪ್-ಸಿ ವೃಂದದ ನೌಕರರಾದ ಶ್ರೀ ಓಬಣ್ಣ, ಶ್ರೀ ಶ್ರೀನಿವಾಸಾಚಾರಿ ಮತ್ತು ಶ್ರೀ ವಸಂತ ಮಾಧವ ಮತ್ತಿತರರಿಗೆ ದಿನಾಂಕ : 29-08-06ರ ನೋಟೀಸು ಸಂಖ್ಯೆ : ಸಿಆಸುಇ 056 ಎಸ್‌ಇಎನ್ 98 ಅನ್ನು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಮೂಲಕ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ, ಸರ್ಕಾರದಿಂದ ಜಾರಿಗೊಳಿಸಲಾದ ನೋಟೀಸಿಗೆ ಶ್ರೀ ಎನ್.ಕೆ. ರಂಗಯ್ಯ ಮತ್ತು ಶ್ರೀ ಎನ್. ಶರಣಪ್ಪ ಇವರುಗಳನ್ನು ಹೊರತುಪಡಿಸಿ ಉಳಿದ ಆಪಾದಿತರು ಲಿಖಿತ ಹೇಳಿಕೆ ಸಲ್ಲಿಸಿದ್ದರೂ ಅವರ ಹೇಳಿಕೆಗಳಲ್ಲಿ ಯಾವುದೇ ಪರಿಗಣಿಸುವಂತಹ ಅಂಶಗಳು ಇಲ್ಲದ ಕಾರಣ ಹಾಗೂ ಪೂರಕ ದಾಖಲೆಗಳನ್ನು ಸಲ್ಲಿಸದ ಕಾರಣ ಅವರ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ಕಂಡು ಹಿಡಿಯುವ ದೃಷ್ಟಿಯಿಂದ ಸದರಿ ಅಧಿಕಾರಿ/ನೌಕರರ ವಿರುದ್ಧ ಜಂಟೀ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ, ಶ್ರೀ ಡಬ್ಲ್ಯು. ಅನ್ಸಾರಿ, ನಿವೃತ್ತ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಬದಲಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತಿ, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಮನವಿಗಳಲ್ಲಿ, ಶ್ರೀ ಓಬಣ್ಣ, ಶ್ರೀ ಶ್ರೀನಿವಾಸಾಚಾರಿ ಮತ್ತು ಶ್ರೀ ವಸಂತ ಮಾಧವ ರವರುಗಳು, ತಮಗೆ ಆರೋಪ ಪಟ್ಟಿ ಜಾರಿಗೊಳಿಸಿದ ದಿನಾಂಕದಂದು ತಾವು ಸೇವೆಯಿಂದ ವಯೋನಿವೃತ್ತರಾಗಿದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮ 214 (2)(b)(ii) ರಂತೆ ತಮ್ಮನ್ನು ವಿಚಾರಣೆಯಿಂದ ಕೈಬಿಡುವಂತೆ ಮನವಿ ಮಾಡಿರುತ್ತಾರೆ. ಪರಿಶೀಲಿಸಲಾಗಿ, ಶ್ರೀ ಓಬಣ್ಣ ರವರು ದಿನಾಂಕ : 30-04-02 ರಂದು, ಶ್ರೀ ಶ್ರೀನಿವಾಸಾಚಾರಿ ರವರು ದಿನಾಂಕ : 30-10-2000 ರಂದು ಮತ್ತು ಶ್ರೀ ವಸಂತ ಮಾಧವ ರವರು ದಿನಾಂಕ : 30-04-06 ರಂದು ವಯೋನಿವೃತ್ತಿ ಹೊಂದಿದ್ದು, ಆದರೆ ಇವರುಗಳಿಗೆ ದಿನಾಂಕ : 29-08-06 ರ ನೋಟಿಸನ್ನು ನಂತರ ಜಾರಿಗೊಳಿಸಲಾಗಿರುವುದು ಕಂಡುಬರುತ್ತದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ವರದಿಯಲ್ಲಿ ಶ್ರೀ ಓಬಣ್ಣ ರವರು ದಿನಾಂಕ : 30-04-02 ರಂದು ಶ್ರೀ ಶ್ರೀನಿವಾಸಾಚಾರಿ ರವರು ದಿನಾಂಕ : 30-10-2000 ರಂದು ಮತ್ತು ಶ್ರೀ ವಸಂತ ಮಾಧವ ರವರು ದಿನಾಂಕ : 30-04-06 ರಂದು ವಯೋನಿವೃತ್ತಿ ಹೊಂದಿರುವುದನ್ನು

ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಗಂಗಾವತಿ ರವರು ದೃಢೀಕರಿಸಿರುತ್ತಾರೆ. ಈ ನೌಕರರ ವಿರುದ್ಧ ಪ್ರಾರಂಭಿಸಿದ ಇಲಾಖಾ ವಿಚಾರಣೆಯ ಪ್ರಕರಣವು 1981–82 ನೇ ಸಾಲಿಗೆ ಸಂಬಂಧಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮ 214 ರ ಪ್ರಕಾರ ನಿವೃತ್ತ ನೌಕರರ ವಿರುದ್ಧ ವಿಚಾರಣೆಯನ್ನು ಪ್ರಕರಣ ನಡೆದ ನಾಲ್ಕು ವರ್ಷಗಳೊಳಗೆ ನಡೆಸಬೇಕಾಗಿರುವುದರಿಂದ, ಈ ಪ್ರಕರಣದಲ್ಲಿ ದೋಷಾರೋಪಣ ಪಟ್ಟಿಯನ್ನು ದಿನಾಂಕ : 29–08–06 ರಂದು ಹೊರಡಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮ 214(2)(b)(ii)ರ ಪ್ರಕಾರ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಅವಕಾಶ ಇಲ್ಲದಿರುವ ಹಿನ್ನೆಲೆಯಲ್ಲಿ ಸರ್ಕಾರವು ಇವರುಗಳನ್ನು ಜಂಟೀ ಇಲಾಖಾ ವಿಚಾರಣೆಯಿಂದ ಕೈಬಿಡಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 014 ಕೆಇವಿ 07, ಬೆಂಗಳೂರು, ದಿನಾಂಕ : 10ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಓಬಣ್ಣ, ನಿವೃತ್ತ ಕಂದಾಯ ನಿರೀಕ್ಷಕರು, ಶ್ರೀ ಶ್ರೀನಿವಾಸಾಚಾರಿ, ನಿವೃತ್ತ ಗ್ರಾಮ ಲೆಕ್ಕಿಗರು ಮತ್ತು ಶ್ರೀ ವಸಂತ ಮಾಧವ, ನಿವೃತ್ತ ಗ್ರಾಮ ಲೆಕ್ಕಿಗರು ತಹಶೀಲ್ದಾರರ ಕಛೇರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ರವರುಗಳನ್ನು ದಿನಾಂಕ : 21–03–07 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 056 ಎಸ್ಇಎನ್ 98 ರಲ್ಲಿ ಆದೇಶಿಸಿರುವ ಜಂಟೀ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಈ ವಿಚಾರಣೆಯು ಪ್ರಾರಂಭವಾಗದೇ ಇದ್ದಲ್ಲಿ, ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 18 ಸಿಆಸು ಇಲಾಖೆ(ಸೇವೆಗಳು–2)

## DEPARTMENT OF PERSONNEL AND ADMINISTRATIVE REFORMS SECRETARIAT

**NO. DPAR 503 SGO 2010 Bangalore, Dated : 07-12-2010**

## CORRIGENDUM

**In the G.O. No. DPAR 874 SGO 2008, dated : 06-04-2010 and in terms and conditions of Deputation of Sri N. Ramesh, Senior Divisional Operations Manager, Bangalore Division, South Western Railways,** on Deputation as Joint Secretary to Government, Department of Infrastructure Development, Government of Karnataka the following para **is substituted, This will be with effect from 15-01-2009.**

**5 & 6 JOINING TIME, PAY AND TRANSFER TRAVELLING ALLOWANCE :**

The official will be entitled to Travelling Allowance and Joining Time both on joining the post on deputation and on reversion there from to the State Government under the rules of the Government of India, the expenditure on this account being borne by the State Government.

This order issues with the concurrence of Finance Department vide Note No. FD 1716 Services-1/2010, dated : 22-11-2010.

By Order and in the name of the Governor of Karnataka

**A.R. Vijayananda Sharma**

PR No. 19 Under Secretary to Government

DPAR (Services-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸೇವಾ ಕೈಪಿಡಿ) ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಇಲಾಖಾ ವಿಚಾರಣ ಕೈಪಿಡಿ) ಹುದ್ದೆಗಳೊಂದಿಗೆ ಪೂರಕ ಸಿಬ್ಬಂದಿಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಕಡತ ಸಂಖ್ಯೆ : ಸಿಆಸುಇ 540 ಸೆಅಸೇ 2010.
2. ಕಡತ ಸಂಖ್ಯೆ : ಸಿಆಸುಇ 541 ಸೆಅಸೇ 2010.
3. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 604 ಎಸ್ಎಎಸ್ 2010, ದಿನಾಂಕ : 21–10–2010.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ರಾಜ್ಯ ಸರ್ಕಾರಿ ನೌಕರರ ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಅಗತ್ಯಾನುಸಾರ ಹಲವಾರು ನಿಯಮಗಳನ್ನು ರಚಿಸಿ ಜಾರಿಗೆ ತಂದಿದ್ದು ರಾಜ್ಯ ಸರ್ಕಾರಿ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಹೊರಡಿಸಿರುವ ವಿವಿಧ ನಿಯಮಗಳಲ್ಲದೆ, ಆರ್ಥಿಕ ಇಲಾಖೆಯು ಸಹ ಕರ್ನಾಟಕ ನಾಗರೀಕ ಸೇವಾ ನಿಯಮಗಳು ಮತ್ತು ಇನ್ನಿತರ ನಿಯಮಗಳನ್ನು ರಚಿಸಿದ್ದು ಅಂತಹ ಎಲ್ಲಾ ನಿಯಮಗಳನ್ನು ಕ್ರೋಢೀಕರಿಸಿ, ಕ್ರೋಢೀಕೃತ ಸಂಪುಟವನ್ನು ಪ್ರಕಟಿಸಬೇಕಾಗಿದೆ.

ಇದಲ್ಲದೇ ಸರ್ಕಾರದ ವಿವಿಧ ಇಲಾಖೆಗಳಲ್ಲಿ ರಾಜ್ಯ ಸರ್ಕಾರಿ ನೌಕರರ ವಿರುದ್ಧ ಅನೇಕ ಇಲಾಖಾ ವಿಚಾರಣಾ ಪ್ರಕರಣಗಳು ಬಹುಕಾಲದಿಂದ ಬಾಕಿಯಿರುತ್ತವೆ. ಹೆಚ್ಚಿನ ಇಲಾಖಾ ವಿಚಾರಣಾ ಪ್ರಕರಣಗಳು ವಿಚಾರಣೆ ಸಮರ್ಪಕವಾಗಿರದ ಕಾರಣಕ್ಕಾಗಿ ನ್ಯಾಯಾಲಯಗಳಲ್ಲಿ ರದ್ದುಗೊಂಡಿರುವ ದೃಷ್ಠಾಂತಗಳು ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬಂದಿದ್ದು, ಹಾಗೂ ವಿಚಾರಣೆ ಸಂಬಂಧದಲ್ಲಿ ಅನುಸರಿಸಬೇಕಾದ ನಿಯಮಗಳು ಮತ್ತು ಪದ್ಧತಿಗಳ ಬಗ್ಗೆ ಸಮರ್ಪಕ ಪರಿಜ್ಞಾನ/ತಿಳುವಳಿಕೆ ಇಲ್ಲದಿರುವುದರಿಂದ ಮತ್ತು ಇಲಾಖಾ ವಿಚಾರಣೆ ನಡೆಸಬೇಕಾದಲ್ಲಿ ಅನುಸರಿಸಬೇಕಾದ ಪದ್ಧತಿಗಳ ಬಗ್ಗೆ ಕರ್ನಾಟಕ ಸಿವಿಲ್ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಲ್ಲಿ ಸ್ಪಷ್ಟ ನಿರ್ದೇಶನಗಳಿದ್ದರೂ, ಈ ನಿಯಮಗಳನ್ನು ಅರಿತು

ಅನುಸರಿಸುವಲ್ಲಿ ವಿಫಲರಾಗಿರುವ ಕಾರಣ ಹೆಚ್ಚಿನ ಇಲಾಖಾ ವಿಚಾರಣಾ ಪ್ರಕರಣಗಳು ನ್ಯಾಯಾಂಗದಲ್ಲಿ ರದ್ದಾಗುತ್ತಿರುವುದು ಗಮನಕ್ಕೆ ಬಂದಿರುತ್ತದೆ. ಆದ್ದರಿಂದ ಈ ನಿಟ್ಟಿನಲ್ಲಿ ಸರ್ಕಾರದಿಂದ ಒಂದು ಇಲಾಖಾ ವಿಚಾರಣಾ ಕೈಪಿಡಿಯನ್ನು ಸಿದ್ದಪಡಿಸಿ ಅಧಿಕಾರಿಗಳ ಉಪಯೋಗಕ್ಕೆ ಒದಗಿಸುವುದು ಸೂಕ್ತವಾಗಿರುವುದರಿಂದ ಈ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸಲು ವೇತನ ಹೆಚ್‌ಎಜಿ ರೂ. 65,000–79,000ರ 2 ಸರ್ಕಾರದ ಪ್ರಧಾನ ಕಾರ್ಯದರ್ಶಿ ಮತ್ತು 6 ಪೂರಕ ಹುದ್ದೆಗಳನ್ನು ಸೃಜಿಸಲು ಮೇಲೆ ಕ್ರಮ ಸಂಖ್ಯೆ (1) ಮತ್ತು (2) ಓದಲಾದ ಕಡತಗಳಲ್ಲಿ ಕೋರಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 21–10–2010ರ ಅಧಿಸೂಚನೆಯಲ್ಲಿ ಶ್ರೀ ರಾಘವನ್ ಸುರೇಶ್, ಐ.ಎ.ಎಸ್. ಅಧಿಕಾರಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಮತ್ತು ವಿಶೇಷಾಧಿಕಾರಿ (ಸೇವಾ ಕೈಪಿಡಿ) ಹುದ್ದೆಗೆ ನೇಮಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 540 ಸಅಸೇ 2010, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್ 2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿ ವೇತನ ಶ್ರೇಣಿ ಹೆಚ್‌ಎಜಿ ರೂ. 65,000–79,000ರ ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಸೇವಾ ಕೈಪಿಡಿ) ಹುದ್ದೆಯನ್ನು ದಿನಾಂಕ : 21–10–2010 ರಿಂದ ಜಾರಿಗೆ ಬರುವಂತೆ ಹಾಗೂ ಉಳಿದ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| I. 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಸೇವಾ ಕೈಪಿಡಿ) (ದಿನಾಂಕ 21–10–2010 ರಿಂದ ಜಾರಿಗೆ ಬರುವಂತೆ) ವೇತನ ಶ್ರೇಣಿ ಹೆಚ್‌ಎಜಿ ರೂ. 65,000–79,000 | 1 ಹುದ್ದೆ |
| 2 | ಶೀಘ್ರಲಿಪಿಗಾರರು | 1 ಹುದ್ದೆ |
| 3 | ಕಿರಿಯ ಸಹಾಯಕ | 1 ಹುದ್ದೆ |
| 4 | ಗ್ರೂಪ್–ಡಿ | 1 ಹುದ್ದೆ |
| | **ಒಟ್ಟು (I)** | **4 ಹುದ್ದೆಗಳು** |
| II.1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಇಲಾಖಾ ವಿಚಾರಣಾ ಕೈಪಿಡಿ) ವೇತನ ಶ್ರೇಣಿ ಹೆಚ್‌ಎಜಿ ರೂ. 65,000–79,000 | 1 ಹುದ್ದೆ |
| 2 | ಶೀಘ್ರಲಿಪಿಗಾರರು | 1 ಹುದ್ದೆ |
| 3 | ಕಿರಿಯ ಸಹಾಯಕ | 1 ಹುದ್ದೆ |
| 4 | ಗ್ರೂಪ್–ಡಿ | 1 ಹುದ್ದೆ |
| | **ಒಟ್ಟು (II)** | **4 ಹುದ್ದೆಗಳು** |
| | **ಒಟ್ಟು (I + II)** | **8 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 946 ವೆಚ್ಚ–12/2010 ದಿನಾಂಕ : 26–11–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಪಿ.ಆರ್. 20

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 02 ಹೆಚ್‌ಡಬ್ಲ್ಯೂಪಿ 2010, ಬೆಂಗಳೂರು ದಿನಾಂಕ : 07–12–2010**

**ವಿಷಯ :** ಜಿಲ್ಲಾ ಮಂತ್ರಿಗಳು, ಸ್ಥಳೀಯ ಶಾಸಕರು, ಹಾಗೂ ಚುನಾವಣಾ ಕ್ಷೇತ್ರದ ಸಂಸತ್ ಸದಸ್ಯರು, ಇತರೆ ಸಚಿವರು/ಸಂಸದರು/ವಿಧಾನ ಸಭಾ ಸದಸ್ಯರು/ವಿಧಾನ ಪರಿಷತ್ತಿನ ಸದಸ್ಯರನ್ನು ಸರ್ಕಾರದ ಸಮಾರಂಭಗಳಿಗೆ ಆಹ್ವಾನಿಸುವ ಬಗ್ಗೆ.

ಪ್ರಜಾಪ್ರಭುತ್ವದಲ್ಲಿ ಚುನಾಯಿತ ಪ್ರತಿನಿಧಿಗಳಾದ ಸಂಸತ್ ಸದಸ್ಯರು ಹಾಗೂ ಶಾಸಕರುಗಳ ಸ್ಥಾನವು ಮಹತ್ವಪೂರ್ಣವಾಗಿದ್ದು, ಅವರುಗಳು ಸಾರ್ವಜನಿಕರ ಹಾಗೂ ಆಡಳಿತ ವ್ಯವಸ್ಥೆಯ ನಡುವೆ ಪ್ರಮುಖ ಕೊಂಡಿಯಾಗಿರುತ್ತಾರೆ. ಸರ್ಕಾರದ ವತಿಯಿಂದ ರಾಜ್ಯಮಟ್ಟದಲ್ಲಿ ಜಿಲ್ಲೆ ಹಾಗೂ ತಾಲ್ಲೂಕು ಮಟ್ಟಗಳಲ್ಲಿ ಏರ್ಪಡಿಸುವ ರಾಷ್ಟ್ರೀಯ ಹಾಗೂ ಇತರೆ ಸರ್ಕಾರದ ಸಮಾರಂಭಗಳಿಗೆ ಆಹ್ವಾನಿಸಿದಾಗ ಅವರಿಗೆ ಯಾವ ರೀತಿಯ ಆಸನದ ವ್ಯವಸ್ಥೆಯನ್ನು ಮಾಡಬೇಕೆಂಬ ಬಗ್ಗೆ ವಿಸ್ತೃತ ಸೂಚನೆಗಳನ್ನು ಸುತ್ತೋಲೆಗಳಲ್ಲಿ ಸರ್ಕಾರವು ನೀಡಿದೆ.

ಸರ್ಕಾರದ ಇಲಾಖೆಗಳು ಏರ್ಪಡಿಸುವಂತಹ ಸಮಾರಂಭಗಳಿಗೆ ಜಿಲ್ಲಾ ಮಂತ್ರಿಗಳು, ಸ್ಥಳೀಯ ಶಾಸಕರು ಹಾಗೂ ಚುನಾವಣಾ ಕ್ಷೇತ್ರದ ಸಂಸತ್ ಸದಸ್ಯರು, ಇತರೆ ಸಚಿವರು/ಸಂಸದರು/ವಿಧಾನ ಸಭಾ ಸದಸ್ಯರು/ವಿಧಾನ ಪರಿಷತ್ತಿನ ಸದಸ್ಯರನ್ನು ತಪ್ಪದೇ ಆಹ್ವಾನಿಸಲು ಈ ಮೂಲಕ ಸೂಚಿಸಲಾಗಿದೆ.

ಸರ್ಕಾರದ ಎಲ್ಲಾ ಸೂಚನೆಗಳನ್ನು ತಾಲ್ಲೂಕು ಮತ್ತು ಜಿಲ್ಲಾಮಟ್ಟದ ಎಲ್ಲಾ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ತಪ್ಪದೇ ಪಾಲಿಸಬೇಕಾಗುತ್ತದೆ. ಆದುದರಿಂದ, ಸರ್ಕಾರದ ಆಯುಕ್ತರು ಮತ್ತು ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರು ತಮ್ಮ ಆಡಳಿತಕ್ಕೊಳಪಡುವ ಎಲ್ಲಾ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು, ಸರ್ಕಾರದ ಸ್ವಾಮ್ಯಕ್ಕೊಳಪಡುವ ಎಲ್ಲಾ ಸಂಸ್ಥೆಗಳು, ಈಗಾಗಲೇ ಹೊರಡಿಸಲಾಗಿರುವ ಆದ್ಯತಾ ಪಟ್ಟಿಯನ್ವಯ ಈ ಕೆಳಗೆ ಸೂಚಿಸಿದ

ಮಾರ್ಪಾಡಿಗೊಳಪಟ್ಟು ಸರ್ಕಾರದ ವತಿಯಿಂದ ಏರ್ಪಡಿಸುವ ರಾಷ್ಟ್ರೀಯ ಸಮಾರಂಭಗಳು ಮತ್ತು ಇತರೆ ಸಮಾರಂಭಗಳಿಗೆ/ಕಾರ್ಯಕ್ರಮಗಳಿಗೆ ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ತಪ್ಪದೇ ಆಹ್ವಾನಿಸಬೇಕೆಂದು ಸೂಚಿಸಲಾಗಿದೆ :

1. ಉಸ್ತುವಾರಿ ಜಿಲ್ಲಾ ಮಂತ್ರಿಗಳು
2. ಇತರೆ ಆಹ್ವಾನಿತ ಮಂತ್ರಿಗಳು
3. ಸ್ಥಳೀಯ ಶಾಸಕರ ಅಧ್ಯಕ್ಷತೆ
4. ಕಾರ್ಯಕ್ರಮ ನಡೆಯುವ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸದರು
5. ಇತರೆ ಸಂಸದರು
6. ಇತರೆ ಶಾಸಕರು – ವಿಧಾನ ಸಭೆ
7. ಇತರೆ ಶಾಸಕರು – ವಿಧಾನ ಪರಿಷತ್ತು

ಈ ಸೂಚನೆಗಳನ್ನು ತಪ್ಪದೇ ಪಾಲಿಸುವಂತೆ ಅವರುಗಳಿಗೆ ಸೂಕ್ತ ನಿರ್ದೇಶನವನ್ನು ನೀಡುವಂತೆ ಕೋರಲಾಗಿದ್ದು, ಈ ಸೂಚನೆಗಳನ್ನು ಪಾಲಿಸದಿದ್ದಲ್ಲಿ ಈ ಬಗ್ಗೆ ಉಸ್ತುವಾರಿ ಸಚಿವರು/ಸಂಸತ್ ಸದಸ್ಯರಿಂದಾಗಲೀ ಅಥವಾ ಶಾಸಕರುಗಳಿಂದಾಗಲೀ ಯಾವುದೇ ದೂರುಗಳು ರಾಜ್ಯ ಸರ್ಕಾರಕ್ಕೆ ಬಂದಲ್ಲಿ ಅಂತಹವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಲಾಗಿದೆ.

**ಕೆ.ಆರ್.ಶ್ರೀನಿವಾಸ**
ಸರ್ಕಾರದ ಕಾರ್ಯದರ್ಶಿ
ಪಿ.ಆರ್. 21 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

## ಕಂದಾಯ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ : ಕಂಇ/590/ಬಿಎಂಎಂ/2007, ಬೆಂಗಳೂರು ದಿನಾಂಕ : 02–12–2010**

ಸರ್ಕಾರದ ಆದೇಶ ಸಂಖ್ಯೆ : ಕಂಇ 590 ಬಿಎಂಎಂ 2007 ದಿನಾಂಕ : 18–10–2010 ರಲ್ಲಿ ಹೊರಡಿಸಲಾದ ಆದೇಶದ ಭಾಗದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8(iii)ರ ಬದಲಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8(viii) ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 22
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–ಎ)

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2010ನೇ ಸಾಲಿನಲ್ಲಿ ವಿವಿಧ ಜಿಲ್ಲಾಧಿಕಾರಿಗಳು ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಅನುದಾನ ಬಿಡುಗಡೆ ಮಾಡುವಂತೆ ಬೇಡಿಕೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 180 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 02ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಾಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೀದರ್ | 100.00 |
| 2 | ಚಿಕ್ಕಬಳ್ಳಾಪುರ | 200.00 |
| 3 | ಚಿತ್ರದುರ್ಗ | 200.00 |
| 4 | ದಾವಣಗೆರೆ | 100.00 |
| 5 | ಗುಲ್ಬರ್ಗಾ | 500.00 |
| 6 | ಹಾಸನ | 100.00 |
| 7 | ಹಾವೇರಿ | 100.00 |
| 8 | ಕೋಲಾರ | 100.00 |

| | | |
|---|---|---|
| 9 | ಕೊಡಗು | 200.00 |
| 10 | ದಕ್ಷಿಣ ಕನ್ನಡ | 100.00 |
| 11 | ಬಳ್ಳಾರಿ | 100.00 |
| 12 | ತುಮಕೂರು | 100.00 |
| 13 | ಚಾಮರಾಜನಗರ | 100.00 |
| 14 | ಚಿಕ್ಕಮಗಳೂರು | 100.00 |
| 15 | ಧಾರವಾಡ | 100.00 |
| 16 | ಉಡುಪಿ | 100.00 |
| 17 | ಯಾದಗಿರಿ | 100.00 |
| | **ಒಟ್ಟು** | **2400.00** |

(ರೂ. ಎರಡು ಸಾವಿರದ ನಾಲ್ಕು ನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಉಪಯೋಗಿಸಿಕೊಳ್ಳತಕ್ಕದ್ದು, ಪರಿಹಾರ ಕಾರ್ಯ ಕೈಗೊಳ್ಳುವಾಗ ಮಾನವ ಹಾನಿ, ಜೀವ ಹಾನಿ, ಜಾನುವಾರು ಜೀವ ಹಾನಿ, ಬೆಳೆಹಾನಿ, ಮನೆ ಹಾನಿಗಳಿಗೆ ಆದ್ಯತೆ ನೀಡತಕ್ಕದ್ದು. ಪ್ರಕೃತಿ ವಿಕೋಪ ಮಾರ್ಗಸೂಚಿಯಲ್ಲಿ ಅವಕಾಶವಿರುವಂತಹ ಕಾಮಗಾರಿಗಳಿಗೆ ಮಾತ್ರ ಮತ್ತು ಮಾರ್ಗಸೂಚಿಯ ಐಟಂ ನಂ. 18ರ ಪ್ರಕಾರ ಅವಕಾಶ ಇರುವ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿದ ನಂತರ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಬಿಡುಗಡೆ ಮಾಡಿರುವ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ : ಆಇ 347 : ವೆಚ್ಚ–7/2010 ದಿನಾಂಕ : 11–11–10 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 23 ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ದಿನಾಂಕ : 26–11–2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 26–11–2010ರ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿಯಲ್ಲಿ ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನಲ್ಲಿ ಇತ್ತೀಚೆಗೆ ಬಿದ್ದ ಭಾರಿ ಮಳೆಯಿಂದ ಹಾನಿಗೊಳಗಾಗಿರುವ ಪ್ರದೇಶಗಳಿಗೆ ಪರಿಹಾರ ಕಾಮಗಾರಿಗಳನ್ನು ಕೈಗೊಳ್ಳಲು ರೂ. 5.00 ಕೋಟಿ ಅನುದಾನ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ದಾವಣಗೆರೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 180 ಟಿಎನ್ಆರ್ 2010 (1), ಬೆಂಗಳೂರು, ದಿನಾಂಕ : 02ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರಿಗೆ ರೂ. 200.00 (ರೂಪಾಯಿ ಇನ್ನೂರು ಲಕ್ಷಗಳು ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಸದರಿ ಹಣವನ್ನು ಜಗಳೂರು ತಾಲ್ಲೂಕಿನಲ್ಲಿ, ಮಳೆಯಿಂದ ಹಾನಿಗೊಳಗಾದ ಪ್ರದೇಶಗಳಿಗೆ ಸಂಬಂಧಪಟ್ಟಂತೆ ಪರಿಹಾರ ಕಾಮಗಾರಿಗಳನ್ನು ಕೈಗೊಳ್ಳಲು ಉಪಯೋಗಿಸುವುದು.

ಪರಿಹಾರ ಕಾರ್ಯ ಕೈಗೊಳ್ಳುವಾಗ ಮಾನವ ಹಾನಿ, ಜೀವ ಹಾನಿ, ಜಾನುವಾರು ಜೀವ ಹಾನಿ, ಬೆಳೆಹಾನಿ, ಮನೆ ಹಾನಿಗಳಿಗೆ ಆದ್ಯತೆ ನೀಡತಕ್ಕದ್ದು. ಪ್ರಕೃತಿ ವಿಕೋಪ ಮಾರ್ಗಸೂಚಿಯಲ್ಲಿ ಅವಕಾಶವಿರುವಂತಹ ಕಾಮಗಾರಿಗಳಿಗೆ ಮಾತ್ರ ಮತ್ತು ಮಾರ್ಗಸೂಚಿಯ ಐಟಂ ನಂ. 18ರ ಪ್ರಕಾರ ಅವಕಾಶ ಇರುವ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಬಿಡುಗಡೆ ಮಾಡಿರುವ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ : ಆಇ : 347 : ವೆಚ್ಚ–7/2010 ದಿನಾಂಕ : 11–11–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 24

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೀದರ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1)ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 73 ಟಿಟಿಪಿ 2000, ದಿ : 21–11–2001
2. ಪ್ರಾಧಿಕಾರದ ಪತ್ರ ಸಂಖ್ಯೆ : ಬಿನಪ್ರಾ : ಟಪಿಪಿಎಂ: ಮಾಪ್ಲಾ (ಪ–1): 2009–10:485, ದಿನಾಂಕ : 29–10–2008.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ : ನಗ್ರಾಯೋ(1) ಉನಿ(ಯೋವಿ) : ಮ.ಯೋ(ಪ–1): ತಾತ್ಕಾಲಿಕ : 47 :2009–10 ರಲ್ಲಿ ದಿನಾಂಕ : 01–12–2009 ಮತ್ತು ದಿನಾಂಕ : 27–10–2010 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರಿ ಆದೇಶದಲ್ಲಿ ಬೀದರ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿ ಆದೇಶಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಕಲಂ 13(ಡಿ) ಮತ್ತು 13(1) ರನ್ವಯ 10 ವರ್ಷಗಳಲ್ಲಿ ಸದರಿ ಮಹಾ ಯೋಜನೆಯನ್ನು ಪರಿಷ್ಕರಿಸಬೇಕಾಗಿರುತ್ತದೆ. ಸರ್ಕಾರವು ಆದೇಶ ಸಂಖ್ಯೆ ; ನಅಇ 55 ಗುಅಪ್ರಾ 2004, ದಿನಾಂಕ : 26–05–2005ರಲ್ಲಿ ಬೀದರ್ ಸ್ಥಳೀಯ ಯೋಜನಾ ಪ್ರದೇಶವನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4ಎ(4)ರನ್ವಯ ಮಾರ್ಪಡಿಸಿ 1505.28 ಹೆಕ್ಟೇರುಗಳಿಂದ 10378.38 ಹೆಕ್ಟೇರುಗಳ ಪ್ರದೇಶಕ್ಕೆ ವಿಸ್ತರಿಸಲಾಗಿದೆ.

ಅದರಂತೆ, ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಬೀದರ್ ನಗರಾಭಿವೃದ್ಧಿ ಪ್ರಾಧಿಕಾರವು ಬೀದರ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪ–1) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಕಲಂ 13(ಡಿ) ಮತ್ತು 13(1) ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ (ಪರಿಷ್ಕೃತ–1) ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಬೀದರ್ ಪಟ್ಟಣದ ಜನಸಂಖ್ಯೆ : 2021ಕ್ಕೆ ಅಂದಾಜಿಸಲಾದ 5,00,000 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–1)ನ್ನು ತಯಾರಿಸಲಾಗಿದೆ. ಬೀದರ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 10378.38 ಹೆಕ್ಟೇರ್ ಪ್ರದೇಶದಲ್ಲಿ 4550.00 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 4550.00 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 2120.45 ಹೆಕ್ಟೇರ್ (ಶೇ.47.22), ವಾಣಿಜ್ಯಕ್ಕಾಗಿ 190.80 ಹೆಕ್ಟೇರ್ (ಶೇ.04.20), ಕೈಗಾರಿಕೆಗಾಗಿ 328.00 ಹೆಕ್ಟೇರ್ (ಶೇ.07.19), ಸಾರ್ವಜನಿಕ: ಅರೆ ಸಾರ್ವಜನಿಕ ವಲಯಕ್ಕಾಗಿ 370.35 ಹೆಕ್ಟೇರ್ (ಶೇ.08.23), ನಾಗರೀಕ ಸೌಲಭ್ಯಕ್ಕಾಗಿ 3.10 ಹೆಕ್ಟೇರ್ (ಶೇ.0.18), ಉದ್ಯಾನವನ್:ಬಯಲು ಜಾಗೆಗಾಗಿ 606.60 ಹೆಕ್ಟೇರ್ (ಶೇ. 13.48), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 875.70 ಹೆಕ್ಟೇರ್ (ಶೇ.19.46) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯನ್ನು (ಪರಿಷ್ಕೃತ–1) ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಕಲಂ 13(ಡಿ) ಮತ್ತು 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯಲ್ಲಿ ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡ ಅಂಶಗಳನ್ನು ಸೂಕ್ತವಾಗಿ ಅಳವಡಿಸಿಕೊಳ್ಳುವ ಬಗ್ಗೆ ಪರಿಶೀಲಿಸಿ ಸಲ್ಲಿಸಲು ಸೂಚಿಸಲಾಯಿತು.

1. FAR incorporated for sites facing 6.0 m wide roads.
2. Specific details for more clarity on Apartments and group housing schemes.
3. Areas of Special Control ;
4. Activities allowed in basement ;
5. Incorporating Coverage factor with respect to sites facing road widening proposals.

ಅದರಂತೆ ಮೇಲ್ಕಂಡ ಅಂಶಗಳ ಬಗ್ಗೆ ಪರಿಶೀಲಿಸಿ, ವಲಯ ನಿಯಮಾವಳಿಗಳಲ್ಲಿ ಪ್ರಾಧಿಕಾರವು ಸೂಕ್ತವಾಗಿ ಅಳವಡಿಸಿಕೊಂಡು ಮಹಾ ಯೋಜನೆ (ಪ–1)ಯ ಕಾಲೋಚಿತಗೊಳಿಸಿದ ವರದಿಯನ್ನು ಸಲ್ಲಿಸಿ ಸರ್ಕಾರದ ಅನುಮೋದನೆ ಕೋರಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 200 ಗುಅಪ್ರಾ 2009, ಬೆಂಗಳೂರು, ದಿನಾಂಕ : 1ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆಗೆ (ಪರಿಷ್ಕೃತ–1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಕಲಂ 13(ಡಿ) ಮತ್ತು 13(1) ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 30 ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ನಅಇ 358 ಬೆಂರೂಪ್ರಾ 2010, ಬೆಂಗಳೂರು ದಿನಾಂಕ: 09ನೇ ಡಿಸೆಂಬರ್, 2010**

ಸರ್ಕಾರದ ಆದೇಶ ಸಂಖ್ಯೆ : ನಅಇ 208 ಬೆಂರೂಪ್ರಾ 2010, ದಿನಾಂಕ : 09–08–2010ರಲ್ಲಿ ಕೋಲಾರ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಅಂತಿಮ ಮಹಾ ಯೋಜನೆ (ಪರಿಷ್ಕೃತ–1)ಯ ಅನುಮೋದನೆ ಪೂರ್ವದಲ್ಲಿ ಸರ್ಕಾರದಲ್ಲಿ ಈಗಾಗಲೇ ಭೂ ಉಪಯೋಗ ಬದಲಾವಣೆಗೆ ಆದೇಶಗಳಾಗಿರುವ ಪ್ರಕರಣಗಳಲ್ಲಿ ಮಹಾ ಯೋಜನೆಯಲ್ಲಿ ಯಾವುದೇ ಭೂ ಬಳಕೆಗೆ ಕಾಯ್ದಿರಿಸಿದ್ದರೂ ಸಹ ಅಂತಹ ಪ್ರಕರಣಗಳಲ್ಲಿ ಸರ್ಕಾರದಿಂದ ಭೂ ಉಪಯೋಗ ಬದಲಾವಣೆಗೆ ಆದೇಶವಾದ ಭೂ ಉಪಯೋಗವನ್ನೇ ಪರಿಗಣಿಸತಕ್ಕದ್ದು ಎಂದು ಸದರಿ ನಿಬಂಧನೆಯನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 31 ನಗರಾಭಿವೃದ್ಧಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಎಂ.ಕೆ. ಹುಬ್ಬಳ್ಳಿ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯ ಅಕ್ರಮಗಳನ್ನು ಸಿ.ಐ.ಡಿ. ತನಿಖೆಗೆ ಒಳಪಡಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಸುರೇಶ್ ಶಿವರುದ್ರಪ್ಪ ಮಾರಿಹಾಳ ಶ್ರೀ ಜಗದೀಶ್ ಸಿ. ಮೆಟಗುಡ್, ಶ್ರೀ ಸಂಜಯ ಬಿ. ಪಾಟೀಲ್, ಮತ್ತು ಶ್ರೀ ಪ್ರಹ್ಲಾದ್ ಕೆ. ರೆಹಮಾಣಿ ಇವರು ದಿನಾಂಕ : 22–04–2010 ರಂದು ಸಲ್ಲಿಸಿದ ಜಂಟಿ ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್ ಶಿವರುದ್ರಪ್ಪ ಮಾರಿಹಾಳ, ಶ್ರೀ ಜಗದೀಶ್ ಸಿ. ಮೆಟಗುಡ್, ಶ್ರೀ ಸಂಜಯ ಬಿ. ಪಾಟೀಲ್, ಮತ್ತು ಶ್ರೀ ಪ್ರಹ್ಲಾದ್ ಕೆ. ರೆಹಮಾಣಿ ಇವರುಗಳು ದಿನಾಂಕ ; 22–04–2010 ರಂದು ಸಲ್ಲಿಸಿದ ಜಂಟಿ ಮನವಿಯಲ್ಲಿ ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ, ಕಿತ್ತೂರು ಮತ ಕ್ಷೇತ್ರದ ಎಂ.ಕೆ. ಹುಬ್ಬಳ್ಳಿಯ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ದಿನಾಂಕ ; 1–4–2010 ರಂದು ಕಾರ್ಖಾನೆಯ ಆಡಳಿತ ಮಂಡಳಿಯ ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆಯಲ್ಲಿ ಚುನಾವಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಧ್ಯಾಹ್ನ 12–30 ಘಂಟೆಗೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರನ್ನು ಆಡಳಿತ ಮಂಡಳಿಯ ಸಭಾ ಭವನದಲ್ಲಿ ಅಕ್ರಮವಾಗಿ ಬಂಧನದಲ್ಲಿಟ್ಟು ಸರ್ಕಾರದ ಚುನಾವಣಾಧಿಕಾರಿಯ ಕರ್ತವ್ಯಕ್ಕೆ ಅಡ್ಡಿ ಉಂಟು ಮಾಡಿ ಹಲ್ಲೆ ಮಾಡಿದ್ದಲ್ಲದೆ ಜೀವ ಬೆದರಿಕೆಯನ್ನು ಒಡ್ಡಿ 2–3 ಕಡತಗಳಿಗೆ ಅಕ್ರಮವಾಗಿ ಸಹಿ ಮಾಡಿಸಿಕೊಂಡಿದ್ದಾರೆಂದು ವ್ಯವಸ್ಥಾಪಕ ನಿರ್ದೇಶಕರು ಕಿತ್ತೂರು ಪೋಲೀಸ್ ಠಾಣೆಗೆ ದೂರು ನೀಡಿದ್ದು ಈ ಕಾರ್ಖಾನೆಯಲ್ಲಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಕರ್ನಾಟಕ ಸಹಕಾರಿ ಸಂಘಗಳ ಕಾಯಿದೆ, ನಿಯಮಗಳು ಮತ್ತು ಕಾರ್ಖಾನೆಯ ಉಪ ನಿಯಮಗಳ ವಿರುದ್ಧವಾಗಿ ಅನಧಿಕೃತವಾಗಿ ಗೋಣಿಚೀಲ, ಸುಣ್ಣ ಹಾಗೂ ಕಾರ್ಖಾನೆಯ ಬಿಡಿ ಭಾಗಗಳನ್ನು ಕಾನೂನಿನ ವಿರುದ್ಧವಾಗಿ ಖರೀದಿಸಿ ಅಂದಾಜು 75 ಕೋಟಿ ರೂಪಾಯಿಯ ಕಾನೂನು ಬಾಹಿರವಾಗಿ ಪಾವತಿಸಿದ್ದಾರೆಂದು ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ವರದಿ ಮಾಡಿದ್ದರ ಹಿನ್ನೆಲೆಯಲ್ಲಿ ಅವರ ವಿರುದ್ಧ ಸಂಚು ರೂಪಿಸಿ ಕಾರ್ಖಾನೆಯ ಆಡಳಿತ ಮಂಡಳಿಯ ಸದಸ್ಯರು ಈ ಅಕ್ರಮ ಕೃತ್ಯಗಳನ್ನು ಎಸಗಿರುತ್ತಾರೆಂದು ತಿಳಿಸಿರುತ್ತಾರೆ.

ಆದುದರಿಂದ ಈ ಎಲ್ಲಾ ಅಂಶಗಳ ತನಿಖೆಗಾಗಿ ಈ ಪ್ರಕರಣವನ್ನು ಸಿ.ಐ.ಡಿ. ತನಿಖೆಗೆ ಒಳಪಡಿಸುವಂತೆ ಕೋರಿರುತ್ತಾರೆ.

ಈ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಂ.ಒಇ 77 ಸಿಐಡಿ 2010, ಬೆಂಗಳೂರು, ದಿನಾಂಕ : 10ನೇ ಡಿಸೆಂಬರ್ 2010**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ, ಕಿತ್ತೂರು ಮತ ಕ್ಷೇತ್ರದ ಎಂ.ಕೆ. ಹುಬ್ಬಳ್ಳಿಯ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ದಿನಾಂಕ 1–4–2010 ರಂದು ಕಾರ್ಖಾನೆಯ ಆಡಳಿತ ಮಂಡಳಿಯ ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆಯಲ್ಲಿ ಚುನಾವಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಧ್ಯಾಹ್ನ 12–30 ಘಂಟೆಗೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರನ್ನು ಆಡಳಿತ ಮಂಡಳಿಯ ಸಭಾ ಭವನದಲ್ಲಿ ಅಕ್ರಮವಾಗಿ ಬಂಧನದಲ್ಲಿಟ್ಟು ಸರ್ಕಾರದ ಚುನಾವಣಾಧಿಕಾರಿಯ ಕರ್ತವ್ಯಕ್ಕೆ ಅಡ್ಡಿ ಉಂಟು ಮಾಡಿ ಹಲ್ಲೆ ಮಾಡಿದ್ದಲ್ಲದೆ ಜೀವ

ಬೆದರಿಕೆಯನ್ನು ಒಡ್ಡಿ 2-3 ಕಡತಗಳಿಗೆ ಅಕ್ರಮವಾಗಿ ಸಹಿ ಮಾಡಿಸಿಕೊಂಡಿದ್ದಾರೆಂದು ವ್ಯವಸ್ಥಾಪಕ ನಿರ್ದೇಶಕರು ಕಿತ್ತೂರು ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣವನ್ನು ಸಿ.ಐ.ಡಿ. ತನಿಖೆಗೆ ವಹಿಸಿ ಆದೇಶಿಸಲಾಗಿದೆ.

ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಬೆಳಗಾವಿ ಇವರು ಈ ಬಗ್ಗೆ ಕಿತ್ತೂರು ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆಗೆ ಸಂಬಂಧಿಸಿದ ಕಡತವನ್ನು ಸಿ.ಐ.ಡಿ. ತಂಡಕ್ಕೆ ಹಸ್ತಾಂತರಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.

ಸಿ.ಐ.ಡಿ. ತಂಡವು ಈ ಪ್ರಕರಣಗಳಲ್ಲಿ ಆದಷ್ಟು ಶೀಘ್ರವಾಗಿ ತನಿಖೆಯನ್ನು ಪೂರ್ಣಗೊಳಿಸಿ, ವರದಿಯನ್ನು ಸರ್ಕಾರಕ್ಕೆ ತ್ವರಿತವಾಗಿ ಸಲ್ಲಿಸಲು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಅಪರಾಧಗಳು).

ಪಿ. ಆ ರ್. 32

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಲ್. ವಿ. ಚಟ್ನಾಳ್‌ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ), ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1) ರ ಸೌಲಭ್ಯ ಪರಿಗಣಿಸುವ ಕುರಿತು.

**ಓದಲಾಗಿದೆ :** (1) ಸರ್ಕಾರದ ಅಧಿಸೂಚನೆ-1 ಸಂ : ಲಾ 15 ಪಿಪಿಇ 83, ದಿನಾಂಕ : 05-04-1984,
(2) ಸರ್ಕಾರದ ಆದೇಶ ಸಂಖ್ಯೆ : ಲಾ 147 ಪಿಪಿಇ 84, ದಿನಾಂಕ : 16/17-08-84,
(3) ಸದರಿ ಅಧಿಕಾರಿಯವರ ಮನವಿ ದಿನಾಂಕ : 16-08-2010
(4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ : ಡಿಪಿಎನ್/ಲೆಕ್ಕ-1/153/2010-2011, ದಿನಾಂಕ : 27-09-2010.

**ಪ್ರಸ್ತಾವನೆ :**

ಮೇಲೆ (4)ರಲ್ಲಿ ಓದಲಾದ ದಿನಾಂಕ : 27-09-2010ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ (1)ರಲ್ಲಿ ಓದಲಾದ ದಿನಾಂಕ ; 05-04-1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:8ರ ಅನ್ವಯ ಶ್ರೀ ಎಲ್. ವಿ. ಚಟ್ನಾಳ್‌ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ), ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ : 19-04-1984ರ ಪೂರ್ವಾಹ್ನ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2) ರಲ್ಲಿ ಓದಲಾದ ದಿನಾಂಕ : 16/17-08-84ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 10.10.1950 ಎಂದು ಒಪ್ಪಲಾಗಿದೆ. ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ 33 ವರ್ಷ 6 ತಿಂಗಳು 9 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಮೂರು ಹೆಚ್ಚುವರಿ ಸೌಲಭ್ಯಕ್ಕೆ ಅವರು ಅರ್ಹರಿರುವುದರಿಂದ ಪರಿಗಣಿಸುವಂತೆ ಕೋರಿರುತ್ತಾರೆ. ಆದ್ದರಿಂದ, ಸದರಿ ನಿಯಮದನ್ವಯ ಶ್ರೀ ಎಲ್. ವಿ ಚಟ್ನಾಳ್‌ಕರ್‌ರವರ ಅರ್ಹತಾದಾಯಕ ಸೇವೆಗೆ ನಿವೃತ್ತಿ ವೇತನಕ್ಕೆ ಮಾತ್ರ ಮೂರು ವರ್ಷಗಳ ಸೇವೆಯನ್ನು ಹೆಚ್ಚುವರಿ ಸೇವೆಯನ್ನು ಸೇರ್ಪಡೆ ಮಾಡಲು ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 332 ಪಿಪಿಇ 2010, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್ 2010**

ಶ್ರೀ ಎಲ್. ವಿ ಚಟ್ನಾಳ್‌ಕರ್, ಸರ್ಕಾರಿ ಅಭಿಯೋಜಕರು (ನಿವೃತ್ತ) ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ರೀತ್ಯ ಮೂರು ವರ್ಷಗಳ ಅಧಿಕ ಸೇವಾವಧಿಯನ್ನು ಅವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ : ಆಇ 1553 ಸೇ-3/2010, ದಿನಾಂಕ : 03-11-2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಕೆ.ಸಿ. ಸಿದ್ಧಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ. ಆರ್. 33

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕಿನ ಭಟ್ಟರ ನರಸಾಪುರ ಗ್ರಾಮದ ಹತ್ತಿರ ಹೊಸ ಜಿನುಗುಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 24–12–2009ರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾ/2010–11/7767

**ಪ್ರಸ್ತಾವನೆ :**

ಕುಷ್ಟಗಿ ಸಣ್ಣ ನೀರಾವರಿ ವಿಭಾಗದ ವ್ಯಾಪ್ತಿಯಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕಿನ ಭಟ್ಟರ ನರಸಾಪುರ ಗ್ರಾಮದ ಹತ್ತಿರ ಹೊಸ ಜಿನುಗುಕೆರೆ ನಿರ್ಮಾಣಕ್ಕಾಗಿ ಭಟ್ಟರ ನರಸಾಪುರ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ 45–33 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಸಂಭವನೀಯ ವೆಚ್ಚ ರೂ. 49,91,100–00ಗಳನ್ನು ಭೂ ಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ ; 29–12–2009ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000, ದಿನಾಂಕ : 08–10–2001ರಲ್ಲಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಮಾಡಲು ಸೂಚಿಸಲಾಗಿದೆ. ಅದರಂತೆ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ–19–ಭೂಸ್ವಾಪ್ರಾ 2010, ಬೆಂಗಳೂರು, ದಿನಾಂಕ : 08ನೇ ಡಿಸೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲುಕಿನ ಭಟ್ಟರ ನರಸಾಪುರ ಗ್ರಾಮದ ಹೊಸ ಜಿನುಗು ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ. 50ರಷ್ಟು ಅಂದರೆ ರೂ. 24,95,550–00 ಲಕ್ಷಗಳನ್ನು (ಇಪ್ಪತ್ತಾಲ್ಕು ಲಕ್ಷದ ತೊಂಬತ್ತೈದು ಸಾವಿರದ ಐನೂರ ಐವತ್ತು ರೂ.ಗಳು ಮಾತ್ರ) ಬಿಡುಗಡೆ ಮಾಡಿ ಈ ಮೊತ್ತವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಸರ್ಕಾರವು ಆದೇಶಿಸಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ; ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ ; 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಗೋವಿಂದರಾಜ್**

ಸರ್ಕಾರದ ಉಪ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ. ಆರ್. 34

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ, ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4117, ದಿನಾಂಕ : 19–07–10

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ನೀಡಲು ರೂ. 36,34,995–00ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ ; 19–07–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ ; 10–10–96ರ ಪ್ರಕಾರ ಬ್ಯಾಲಿಹಾಳ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 98–37 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಂಡಿದ್ದು ವಿಶೇಷ ಭೂಸ್ವಾಧೀನಾಧಿಕಾರಿಯವರು ದಿನಾಂಕ 30–11–1998ರಂದು ರಚಿಸಿದ ಐತೀರ್ಪಿನಲ್ಲಿ ಪ್ರತಿ ಎಕರೆಗೆ ರೂ. 15,000/– ಗಳನ್ನು ನಿಗದಿಪಡಿಸಿದ್ದಾರೆ. ಐತೀರ್ಪಿನಂತೆ ಪರಿಹಾರ ಪಡೆದ ಭೂ ಮಾಲೀಕರು ಹೆಚ್ಚಿನ ಪರಿಹಾರ ಕೋರಿ ಕೊಪ್ಪಳ ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ರೂ. 55,000/– ಗಳನ್ನು ನಿಗಧಿಪಡಿಸಿ ದಿನಾಂಕ ; 07–03–05ರಂದು ಸಾಮಾನ್ಯ ತೀರ್ಪು ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ಪ್ರಕರಣಾವಾರು ವಿವರ ಕೆಳಕಂಡಂತಿದೆ.

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಬ್ಯಾಲಿಹಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|---|
| 1 | 59/02 | 8/1,8/2 | 10–18 | 1721540 |
| 2 | 60/02 | 9/ಎ | 1–02 | 173430 |
| 3 | 61/02 | 10/1ಎ | 2–13 | 383414 |
| 4 | 62/02 | 10/1ಎ | 2–13 | 383414 |

| | | | | |
|---|---|---|---|---|
| 5 | 64/02 | 10/2ಎ | 2-24 | 428705 |
| 6 | 65/02 | 12/1 | 2-06 | 354593 |
| 7 | 66/02 | 12/6 | 1-06 | 189899 |
| | | | ಒಟ್ಟು | 3634995 |

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್ ಡಿ 1356 ಎಲ್‌ಸಿಜಿ 2008, ದಿನಾಂಕ 01/01/09 ರಲ್ಲಿ ನಿರ್ಧರಿಸಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂ ಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ-107-ಭೂಸ್ವಾಪ್ರಾ 2010, ಬೆಂಗಳೂರು, ದಿನಾಂಕ : 23ನೇ ನವೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 59/02 ರಿಂದ 62/02 ಮತ್ತು 64/02 ರಿಂದ 66/02ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 36,34,995-00ಗಳನ್ನು (ಮುವತ್ತಾರು ಲಕ್ಷದ ಮುವತ್ತಾನ್ಲುಕ್ಕು ಸಾವಿರದ ಒಂಬೈನೂರ ತೊಂಬತ್ತೈದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ; ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ ; 20-10-10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ. ಆರ್. 35 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ 29-09-2010 ರಂದು ಅಂತ್ಯಗೊಂಡ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2010-11/5391.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಸ.ನಂ. 303ರ 9-10 ಎಕರೆ ಜಮೀನಿಗೆ ಹುಕ್ಕೇರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ನೀಡಿದ ಆದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 54,50,137-00 ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 29-09-2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 20-08-1992ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 28-03-1995 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ: 73/01 ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ದಿನಾಂಕ 17-04-2004 ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,70,000/- ಗಳ ಬೆಲೆಯನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ದಿನಾಂಕ 17-04-2004 ರಂದು ಆದೇಶಿಸಿದೆ. ಈ ತೀರ್ಪಿನ ವಿರುದ್ಧ ಸಹಾಯಕ ಆಯುಕ್ತರು, ಬೆಳಗಾವಿ ಉಪ ವಿಭಾಗ, ಬೆಳಗಾವಿ ಇವರು ಕರ್ನಾಟಕ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ, ಧಾರವಾಡ ಇಲ್ಲಿ ಎಂ.ಎಫ್.ಎ. ಸಂಖ್ಯೆ: 7598-04 ನ್ನು ಸಲ್ಲಿಸಿದ್ದು, ನ್ಯಾಯಾಲಯವು ದಿನಾಂಕ 20-11-2008 ರಂದು ವಜಾ ಮಾಡಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಲಾ 1066 ಎಲ್‌ಬಿಎಸ್ 2009, ದಿನಾಂಕ 22-07-2009 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ | ಸ.ನಂ. | ಎಂಎಫ್‌ಎ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|---|---|
| 1 | 73/01 | 303 | 7598/04 | 9–10 | 32,64,900–00 |
| | **ಒಟ್ಟು** | | | | **32,64,900–00** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿ ವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 35 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 73/01 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 32,64,900–00 ಗಳನ್ನು (ಮೂವತ್ತೆರಡು ಲಕ್ಷದ ಅರವತ್ತಾಲ್ಕು ಸಾವಿರದ ಒಂಬೈನೂರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 36 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ನಾಗನೂರು ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಬೆಳೆ ನಷ್ಟ ಪರಿಹಾರ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 170 ಭೂಸ್ವಾಪ್ರ 2006, ದಿನಾಂಕ 06–09–2006.
2. ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರ ಆದೇಶ ಸಂಖ್ಯೆ: ಭೂಸ್ವಾವಿವಹಿ.ರಾ 85/99–2000, ದಿನಾಂಕ 05–07–2010.
3. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2010–11/5170, ದಿನಾಂಕ 14–09–2010.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ನಾಗನೂರು ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ನಾಗನೂರು ಗ್ರಾಮದ ಸರ್ವೆ ನಂಬರ್ 42ರ 3–07 ಎಕರೆ ಜಮೀನನ್ನು ಹೆಚ್ಚುವರಿಯಾಗಿ ಸ್ವಾಧೀನಪಡಿಸಿಕೊಂಡಿದ್ದು, ಭೂಸ್ವಾಧೀನದ 4(1)ರ ಅಧಿಸೂಚನೆಯನ್ನು ದಿನಾಂಕ 24–08–2000ರಂದು ಮತ್ತು ಪರಿಹಾರ ಧನದ ಐತೀರ್ಪುನ್ನು ದಿನಾಂಕ 26–07–2002 ರಂದು ಹೊರಡಿಸಲಾಗಿದೆ. ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂ ಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಸವದತ್ತಿ ಇಲ್ಲಿ ಸಲ್ಲಿಸಿದ ಎಲ್.ಎ.ಸಿ. ಸಂಖ್ಯೆ: 259/02 ರಲ್ಲಿ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರವನ್ನು 4(1)ರ ಅಧಿಸೂಚನೆ ದಿನಾಂಕದಿಂದ ಲೆಕ್ಕ ಹಾಕಿದ ಬಡ್ಡಿಯೊಂದಿಗೆ ಪಾವತಿಸಲು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ 06–09–2006ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಿ ರೂ.8,88,785–00 ಗಳನ್ನು ಬಿಡುಗಡೆ ಮಾಡಲಾಗಿದೆ.

ಶ್ರೀ ಈರಪ್ಪ ರಾಯಪ್ಪ ಇವರು ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆ ದಿನಾಂಕದವರೆಗೆ ಭೂ ಬಾಡಿಗೆ ಅಥವಾ ಬೆಳೆನಷ್ಟ ಪರಿಹಾರ ಪಾವತಿಸುವಂತೆ ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿ, ಉಪವಿಭಾಗಾಧಿಕಾರಿ, ಬೈಲಹೊಂಗಲ ಇವರು ನಷ್ಟ ಪರಿಹಾರ ರೂ.12,78,476–00 ನೀಡಲಿ ಮೇಲೆ (2) ರಲ್ಲಿ ಓದಲಾದ ದಿನಾಂಕ 05–07–2010ರಂದು ಆದೇಶ ಹೊರಡಿಸಿರುತ್ತಾರೆ. ಈ ಆದೇಶದಂತೆ ನಷ್ಟ ಪರಿಹಾರ ಧನ ಪಾವತಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಹಣ ಬಿಡುಗಡೆ ಮಾಡಲು ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ 14–09–2010ರ ಪತ್ರದಲ್ಲಿ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 136 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್ 2010**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ನಾಗನೂರು ಗ್ರಾಮದ ಹದ್ದಿಯಲ್ಲಿ ನಿರ್ಮಿಸಲಾದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ನಾಗನೂರು ಗ್ರಾಮದ ಸ.ನಂ. 42ರ 3–07 ಎಕರೆ ಜಮೀನಿಗೆ ಉಪವಿಭಾಗಾಧಿಕಾರಿ, ಬೈಲಹೊಂಗಲ ಇವರು ರಚಿಸಿರುವ

ಐತೀರ್ಪಿನಂತೆ ರೂ.12,78,476–00 ಗಳ (ಹನ್ನೆರಡು ಲಕ್ಷದ ಎಪ್ಪತ್ತೆಂಟು ಸಾವಿರದ ನಾನೂರ ಎಪ್ಪತ್ತಾರು ರೂ.ಗಳು ಮಾತ್ರ) ಬೆಳೆನಷ್ಟ ಪರಿಹಾರ ಪಾವತಿಸಲು ಸರ್ಕಾರದ ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 37 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಸತಿ ಸಚಿವಾಲಯ

**ವಿಷಯ :** ವಿಧಾನಸಭಾ ಕ್ಷೇತ್ರಾವಾರು ಜಾಗೃತ ಸಮಿತಿ ಸಭೆ ನಡೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ 86 ಹೆಚ್‌ಎಎಂ 2009 ದಿನಾಂಕ 07–07–2010.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 16 ಯೋಉಮಾ/2010, ದಿನಾಂಕ 18–01–2010.
3. ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂಖ್ಯೆ: ಎಂಡಿ ಆರ್‌ಜಿಆರ್‌ಹೆಚ್‌ಸಿಎಲ್ 01 ಬಿಐಎಸ್ 16/2010, ದಿನಾಂಕ 27–11–2010.

**ಪ್ರಸ್ತಾವನೆ :**

ವಸತಿ ಇಲಾಖೆಯು ಕೈಗೊಂಡ ವಿವಿಧ ವಸತಿ ಯೋಜನೆಗಳಡಿಯಲ್ಲಿ ಗುರುತಿಸಲಾದ ಫಲಾನುಭವಿಗಳ ಪಟ್ಟಿಯನ್ನು ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ವಿಧಾನಸಭಾ ಜಾಗೃತ ಸಮಿತಿ ಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆಯುವುದು ಕಡ್ಡಾಯವಾಗಿರುತ್ತದೆ. ಆದರೆ ಕೆಲವು ವಿಧಾನಸಭಾ ಕ್ಷೇತ್ರದ ಶಾಸಕರ ಸ್ಥಾನಗಳು ತೆರವುಗೊಂಡಿದ್ದು, ಇಂತಹ ವಿಧಾನಸಭಾ ಕ್ಷೇತ್ರಗಳಲ್ಲಿ ಜಾಗೃತ ಸಮಿತಿ ಸಭೆಯನ್ನು ನಡೆಸಲು ಸಾಧ್ಯವಾಗದಿರುವುದರಿಂದ ಫಲಾನುಭವಿಗಳ ಪಟ್ಟಿಯನ್ನು ಅಂತಿಮಗೊಳಿಸಲು ಸಾಧ್ಯವಾಗದೆ ಯೋಜನೆಗಳ ಅನುಷ್ಠಾನದಲ್ಲಿ ವಿಳಂಬವಾಗುತ್ತಿದೆ. ಅಂತೆಯೇ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಇ 179 ಹೆಚ್‌ಎಎಂ 2010, ಬೆಂಗಳೂರು, ದಿನಾಂಕ : 06ನೇ ಡಿಸೆಂಬರ್ 2010**

ವಿವಿಧ ವಸತಿ ಯೋಜನೆಗಳಡಿಯಲ್ಲಿ ಗುರುತಿಸಲಾದ ಫಲಾನುಭವಿಗಳ ಪಟ್ಟಿಯನ್ನು ಅಂತಿಮಗೊಳಿಸಲು ಆಯಾ ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ವಿಧಾನ ಸಭಾ ಜಾಗೃತ ಸಮಿತಿ ಸಭೆಯಲ್ಲಿ ಅನುಮೋದನೆಯಾಗಬೇಕಾಗಿದ್ದು, ಒಂದು ವೇಳೆ ಯಾವುದೇ ಕಾರಣದಿಂದ, ವಿಧಾನ ಸಭಾ ಕ್ಷೇತ್ರದ ಶಾಸಕರ ಸ್ಥಳವು ತೆರವುಗೊಂಡಿದ್ದಲ್ಲಿ, ಆ ಸ್ಥಳವನ್ನು ತುಂಬುವವರೆಗೆ ಆಯಾ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಕಂದಾಯ ಇಲಾಖೆಯ ಉಪ ವಿಭಾಗಾಧಿಕಾರಿಗಳನ್ನು ಆಯಾ ವಿಧಾನಸಭಾ ಜಾಗೃತ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿ ಸಭೆ ನಡೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಆರ್. ವಲ್ಲೂರ**

ಪಿ.ಆರ್. 38 ಪೀಠಾಧಿಕಾರಿ–2, ವಸತಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ ನಿವೇಶನ ಸಂಖ್ಯೆ: 16ಜಿ ರಲ್ಲಿ 125 x 130+135/2 ವಿಸ್ತೀರ್ಣದ ಮತ್ತು 16ಎನ್ ರಲ್ಲಿ 125 x 125+130/2 ಅಡಿ ವಿಸ್ತೀರ್ಣದ ಜಾಗವನ್ನು 'ALLIANCE FRANCAISE de Bangalore' ಸಂಸ್ಥೆಗೆ ನೀಡಲಾಗಿರುವ ಗುತ್ತಿಗೆ ಅವಧಿಯನ್ನು ನವೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಂಎ 295 ಎಂಎನ್‌ಜಿ 77, ದಿನಾಂಕ 02–05–1979.
2. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ: ಎ3(2)/ಪಿ.ಆರ್/03/08–09, ದಿನಾಂಕ 21–08–2009.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ 'ALLIANCE FRANCAISE de Bangalore' ರವರಿಗೆ ನಿವೇಶನ ಸಂಖ್ಯೆ: 16ಜಿ ರಲ್ಲಿ 125 x 130+135/2 ವಿಸ್ತೀರ್ಣದ ಮತ್ತು 16ಎನ್ ರಲ್ಲಿ 125 x 125+130/2 ಅಡಿ ವಿಸ್ತೀರ್ಣದ ಜಾಗವನ್ನು ಪ್ರತಿ ವರ್ಷಕ್ಕೆ ರೂ. 500–00 ಗಳಂತೆ ದರವನ್ನು ನಿಗದಿಪಡಿಸಿ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗಿದ್ದು, ಗುತ್ತಿಗೆ ಅವಧಿಯು ದಿನಾಂಕ 01–05–2009 ರಂದು ಮುಕ್ತಾಯಗೊಂಡಿರುತ್ತದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ 21–08–2009ರ ಬಿ.ಬಿ.ಎಂ.ಪಿ. ಆಯುಕ್ತರ ಪತ್ರದಲ್ಲಿ ಸಂಸ್ಥೆಯು ಗುತ್ತಿಗೆ ನೀಡಿದ ಜಾಗದಲ್ಲಿ ಅಂತರರಾಷ್ಟ್ರೀಯ ಕಟ್ಟಡವನ್ನು ನಿರ್ಮಿಸಿ ಸುಮಾರು 3000 ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಫ್ರೆಂಚ್ ಭಾಷಾ ತರಬೇತಿ ನೀಡುತ್ತಿದೆ. ಜೊತೆಗೆ ಇತರೆ ವೈಜ್ಞಾನಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿದೆ. ಅಟಾಷೆ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ಕಛೇರಿಯು ಈ ಕೇಂದ್ರದ ಅಂತರ್ಗತ ಭಾಗವಾಗಿದ್ದು, ಭಾರತೀಯ ವಿಜ್ಞಾನ ಸಂಸ್ಥೆ, ದಿ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್ ಮುಂತಾದ ಪ್ರತಿಷ್ಠಿತ ಸಂಸ್ಥೆಗಳ ಸಹಭಾಗಿತ್ವದಲ್ಲಿ ಉಪನ್ಯಾಸ ಕಾರ್ಯಕ್ರಮಗಳು, ಕಾರ್ಯಾಗಾರಗಳನ್ನು ಆಯೋಜಿಸುತ್ತಿದೆ. ಅದಲ್ಲದೆ ಯೋಗ, ತಾಯ–ಚಿ, ನೃತ್ಯ ರೂಪಕಗಳ ತರಗತಿಗಳು ಮುಂತಾದ

ಚಟುವಟಿಕೆಗಳನ್ನು ಆಯೋಜಿಸತ್ತಿದೆ. ಈ ಸಂಸ್ಥೆಯು ವರ್ಷವಿಡೀ ಪ್ರದರ್ಶನಗಳು, ಸಂಗೀತ ಕಛೇರಿಗಳು, ನಾಟಕಗಳು, ಚಲನಚಿತ್ರೋತ್ಸವ ಮುಂತಾದ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದು, ಇವು ಕರ್ನಾಟಕ ಹಾಗೂ ಫ್ರಾನ್ಸ್ ನಡುವೆ, ಭಾರತ ಮತ್ತು ಫ್ರಾನ್ಸ್ ನಡುವೆ, ವಿಶ್ವದ ಇತರೆ ದೇಶಗಳೊಂದಿಗೆ ಉತ್ತಮ ಸಂಬಂಧ ನಿರ್ಮಿಸಿಕೊಳ್ಳಲು ಸಹಕಾರಿಯಾಗಿದೆ. ಬೆಂಗಳೂರು ದೇಶದ ಪ್ರಮುಖ ಮಾಹಿತಿ ತಂತ್ರಜ್ಞಾನ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಮಹತ್ವದ ಸ್ಥಳವೆನಿಸಿದ್ದು, ಸಂಸ್ಥೆಯ ಕಾರ್ಯಚಟುವಟಿಕೆಗಳಿಂದ ವಿಶ್ವದ ಇತರ ದೇಶಗಳೊಡನೆ ಬೆಂಗಳೂರು ನಗರ ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬಾಂಧವ್ಯವು ವೃದ್ಧಿಗೊಳ್ಳಲು ಸಹಕಾರಿಯಾಗಬಹುದು ಎಂಬ ಅಂಶ ಸಹ ವ್ಯಕ್ತವಾಗಿದೆ. ಸ್ಥಳದಲ್ಲಿ ಈಗಾಗಲೇ ನಿರ್ಮಿಸಿರುವ ಕಟ್ಟಡದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಇನ್ನೂ ಪರಿಣಾಮಕಾರಿಯಾಗಿ ಮುಂದುವರೆಸಿದಲ್ಲಿ ಫ್ರಾನ್ಸ್ ಮತ್ತು ಭಾರತದ ನಡುವೆ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಬಾಂಧವ್ಯ ಇನ್ನಷ್ಟು ಅಭಿವೃದ್ಧಿಗೊಳ್ಳಲು ಸಹಕಾರಿ ಆಗುತ್ತದೆ. ಕಳೆದ 30 ವರ್ಷಗಳ ಅವಧಿಯಲ್ಲಿ ಮಾರುಕಟ್ಟೆ ದರವು ಅತ್ಯಂತ ಗರಿಷ್ಠ ಮಟ್ಟದಲ್ಲಿ ಇದ್ದು, ಅದರಂತೆ ಲೆಕ್ಕಾಚಾರ ಮಾಡಿದಾಗ ಗುತ್ತಿಗೆ ದರವು ಮಾಹೆಯಾನ ರೂ. 12,89,167–00 ಗಳಾಗುತ್ತಿದ್ದು, ಅದನ್ನು ಪಾವತಿಸಲು ಸಂಸ್ಥೆಯು ಬಲಿಷ್ಠವಾಗಿಲ್ಲ ಎಂಬುದನ್ನು ಮತ್ತು ಇಂತಹುದೇ ಲಾಭರಹಿತ ಚಟುವಟಿಕೆಗಳನ್ನು ಹಮ್ಮಿಕೊಂಡಿರುವ ಉದಯಭಾನು ಕಲಾ ಸಂಘ, ಕೆಂಪೇಗೌಡ ನಗರ ಮತ್ತು 51ನೇ ವಾರ್ಡಿನ ಕಟ್ಟೆಬಳಗಕ್ಕೂ ಕೂಡ ಮಾರುಕಟ್ಟೆ ದರದಂತೆ ನೀಡದೆ ರಿಯಾಯಿತಿ ದರದಲ್ಲಿ ನೀಡಿರುವ ಪೂರ್ವ ನಿದರ್ಶನವನ್ನು ಗಮನದಲ್ಲಿಟ್ಟುಕೊಂಡು, ವರ್ಷಕ್ಕೆ ಕನಿಷ್ಠ ರೂ. 1000/– ಗಳಂತೆ ಗುತ್ತಿಗೆ ನೀಡಿರುವ ಪೂರ್ವ ನಿದರ್ಶನವನ್ನು ಗಮನದಲ್ಲಿಟ್ಟುಕೊಂಡು, ವರ್ಷಕ್ಕೆ ಕನಿಷ್ಠ ರೂ. 1000/– ಗಳಂತೆ ಗುತ್ತಿಗೆ ದರವನ್ನು ಹೆಚ್ಚಿಸುವ ಅನುಪಾತದಂತೆ 30 ವರ್ಷಗಳು ಕಳೆದಿರುವುದರಿಂದ ವಾರ್ಷಿಕವಾಗಿ ರೂ. 30,000/– ಗಳನ್ನು ನಿಗದಿಪಡಿಸಿ ಕರ್ನಾಟಕ ಮುನ್ಸಿಪಾಲ್ ಕಾರ್ಪೋರೇಷನ್ ಕಾಯ್ದೆ 1976ರ ಕಲಂ 176(6) (b) (ii) ರನ್ವಯ ಪಾಲಿಕೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 3 ವರ್ಷಗಳಿಗೆ ಮಿತಿಗೊಳಿಸಿ ನವೀಕರಿಸಲು ಮತ್ತು ಮುಂದಿನ 27 ವರ್ಷಗಳ ಅವಧಿ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ಪಾಲಿಕೆಯ ಆಡಳಿತಾಧಿಕಾರಿಗಳು ನಿರ್ಣಯಿಸಿರುವುದರಿಂದ ಹಾಗೂ ಸಂಸ್ಥೆಯು ಸಂಪೂರ್ಣವಾಗಿ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಂಡು ಅಂತರರಾಷ್ಟ್ರೀಯ ಭಾಂದವ್ಯ ಅಭಿವೃದ್ಧಿಗೊಳಿಸಲು ಸಹಕಾರಿಯಾಗುವುದರಿಂದ ಮುಂದಿನ 30 ವರ್ಷಗಳ ಪೈಕಿ 3 ವರ್ಷದ ಅವಧಿಗೆ ಕನಿಷ್ಠ ವಾರ್ಷಿಕ ದರವಾಗಿ ರೂ.30,000/– ಗಳನ್ನು ನಿಗದಿಪಡಿಸಿರುವ ಕಾರಣ ಉಳಿದ 27 ವರ್ಷ ಅವಧಿ ಬಗ್ಗೆಯೂ ಸಹ ರೂ. 30,000/– ಗಳಂತೆ ವಾರ್ಷಿಕ ಗುತ್ತಿಗೆ ದರ ನಿಗದಿಪಡಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

3. ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಹಾಗೂ ಸಂಸ್ಥೆಯು ಅಂತರರಾಷ್ಟ್ರೀಯ ಬಾಂಧವ್ಯವನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಿರುವ ಅಂಶವನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 165 ಎಂಎನ್‌ಜಿ 2009 ಬೆಂಗಳೂರು, ದಿನಾಂಕ : 29ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ 'ALLIANCE FRANCAISE de Bangalore' ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ನೀಡಿರುವ ನಿವೇಶನ ಸಂಖ್ಯೆ: 16ಜಿ ರಲ್ಲಿ 125 x 130+135/2 ಅಡಿ ವಿಸ್ತೀರ್ಣ ಮತ್ತು 16ಎನ್ ರಲ್ಲಿ 125 x 125+130/2 ಅಡಿ ವಿಸ್ತೀರ್ಣದ ಜಾಗವನ್ನು ವಾರ್ಷಿಕ ರೂ. 30,000/– ಗಳ (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗುತ್ತಿಗೆ ದರದಂತೆ ಪ್ರತಿ ವರ್ಷ ರೂ. 1,000/– ಗಳನ್ನು (ಒಂದು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚಿಸುವ ಷರತ್ತಿಗೊಳಪಟ್ಟು ದಿನಾಂಕ 01–05–2009 ರಿಂದ 30 (ಮೂವತ್ತು) ವರ್ಷಗಳ ಅವಧಿಗೆ ಗುತ್ತಿಗೆ ಅವಧಿಯನ್ನು ನವೀಕರಿಸಲು ಸರ್ಕಾರದ ಅನುಮೋದನೆ ನೀಡಿದೆ.

ಸಂಸ್ಥೆಗೆ ಈ ಹಿಂದೆ ಗುತ್ತಿಗೆ ನೀಡಲಾದ ಸಂದರ್ಭದಲ್ಲಿ ಸರ್ಕಾರ ಹಾಗೂ ಪಾಲಿಕೆಯು ಆಗಿಂದಾಗ್ಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು ಯಥಾವತ್ತಾಗಿ ಅನ್ವಯಿಸುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 538 ವೆಚ್ಚ 9/2010, ದಿನಾಂಕ 17–08–2010 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 39 ನಗರಾಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಿಜಾಪುರ ನಗರದಲ್ಲಿ ಗ್ರೀನ್ ಫೀಲ್ಡ್ ವಿಮಾನ ನಿಲ್ದಾಣವನ್ನು ನಿರ್ಮಾಣ ಮಾಡಲು ಭೂಸ್ವಾಧೀನಕ್ಕೆ ಅಗತ್ಯವಾದ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ರಾಅವಿ 2003, ದಿನಾಂಕ 15–02–2007.
2. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ರಾಅವಿ 2003, ದಿನಾಂಕ 23–03–2007.
3. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ರಾಅವಿ 2003, ದಿನಾಂಕ 03–11–2007.
4. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ಮೂಇವಿ2003, ದಿನಾಂಕ 31–03–2009.
5. ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂಇ/ಎಲ್.ಎನ್.ಡಿ/ಸಿ.ಆರ್.127(2)/00–01 ದಿನಾಂಕ 22–07–2009.
6. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ರಾಅವಿ 2003, ದಿನಾಂಕ 26–08–2009.
7. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 42 LBJ 2007, ದಿನಾಂಕ 25–09–2010.
8. ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂಇ/ಎಲ್.ಎನ್.ಡಿ/ಸಿ.ಆರ್/304/2009–10 ದಿನಾಂಕ 26–10–2010.

**ಪ್ರಸ್ತಾವನೆ :**

1. ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣದ ನಿರ್ಮಾಣಕ್ಕಾಗಿ ಅವಶ್ಯವಿರುವ ಭೂಸ್ವಾಧೀನಕ್ಕಾಗಿ ರೂ. 5.50 ಕೋಟಿಗಳನ್ನು ಕೆಲವು ಷರತ್ತಿಗಳೊಂದಿಗೆ ಬಿಡುಗಡೆ ಮಾಡಲು ಮಂಜೂರಾತಿಯನ್ನು ನೀಡಲಾಗಿರುತ್ತದೆ.

2. ಮೇಲೆ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಬಿಜಾಪುರದಲ್ಲಿ ಗ್ರೀನ್ ಫೀಲ್ಡ್ ವಿಮಾನ ನಿಲ್ದಾಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಆಧಾರದ ಮೇಲೆ ಸ್ಥಾಪಿಸಲು ಮಂಜೂರಾತಿಯನ್ನು ನೀಡಲಾಗಿದೆ.

3. ಮೇಲಿನ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 03–11–2007ರಲ್ಲಿ ಇದೇ ಉದ್ದೇಶಕ್ಕೆ ರೂ. 4.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ 31-03-2009ರ ಸರ್ಕಾರಿ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣಕ್ಕೆ ಭೂಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಜಮೀನಿನ ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 15.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಬಿಜಾಪುರ, ಇವರು ಬಿಜಾಪುರ ವಿಮಾನ ನಿಲ್ದಾಣದ ಭೂಸ್ವಾಧೀನಕ್ಕಾಗಿ ಒಟ್ಟು ರೂ.30,64,37,500/– ಅನುದಾನ ಅವಶ್ಯಕತೆ ಇದ್ದು, ಈ ಪೈಕಿ ಈಗಾಗಲೇ ರೂ.24,50,00,000/– ಅನುದಾನವನ್ನು ಬಿಡುಗಡೆ ಮಾಡಲಾಗಿದೆ ಎಂದು ಉಳಿದ ರೂ. 6,14,37,500/– ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

6. ಈ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಉಲ್ಲೇಖ (6)ರ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಅವಶ್ಯವಿರುವ ರೂ. 5.00 ಕೋಟಿಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

7. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಬಿಜಾಪುರ, ವಿಮಾನ ನಿಲ್ದಾಣದ ಸ್ಥಾಪನೆಗಾಗಿ ಹಾಗೂ ಇತರೆ ಚಟುವಟಿಕೆಗಾಗಿ ಬಿಜಾಪುರ ತಾಲ್ಲೂಕಿನ ಬುರಣಾಪುರ, ಅಲಿಯಾಬಾದ್ ಮತ್ತು ಮದಬಾದಿ ಗ್ರಾಮಗಳಲ್ಲಿನ ಒಟ್ಟಾರೆ 347.33 ಎಕರೆ ಸರ್ಕಾರಿ ಹುಲ್ಲುಗಾವಲು ಜಮೀನನ್ನು ಬಿಜಾಪುರ ವಿಮಾನ ನಿಲ್ದಾಣ ಸ್ಥಾಪನೆಗಾಗಿ ಕೆಐಎಡಿಬಿಗೆ ಹಸ್ತಾಂತರಿಸಲು ದಿನಾಂಕ 25-09-2010ರ ಆದೇಶ ಸಂಖ್ಯೆ ಆರ್‌ಡಿ 42 ಎಲ್‌ಜಿಜೆ 2007ರ ಅನುಮತಿ ನೀಡಲಾಗಿರುತ್ತದೆ.

8. ಕ್ರಮ ಸಂಖ್ಯೆ 8ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ದಿನಾಂಕ 25-09-2010ರ ಸರ್ಕಾರದ ಆದೇಶದನ್ವಯ 347.33 ಎಕರೆ ಜಮೀನಿಗೆ ಸಂಬಂಧಿಸಿದಂತೆ, ಜಮೀನಿನ ಬೆಲೆ ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ.32,81,96,124.00 ಮೌಲ್ಯವನ್ನು ಪಾವತಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 88 ರಾಅವಿ 2003 ಬೆಂಗಳೂರು, ದಿನಾಂಕ : 08ನೇ ಡಿಸೆಂಬರ್ 2010**

ಬಿಜಾಪುರ ವಿಮಾನ ನಿಲ್ದಾಣಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳಲು ಅವಶ್ಯವಿರುವ ಬಾಕಿ ಹಣ ರೂ.32,82,00,000 ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 5465-01-190-1-05-133– ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ–SDP (ಯೋಜನೆ) ಹಾಗೂ ಲೆಕ್ಕಶೀರ್ಷಿಕೆ 5465-01-190-1-05-211 ಬಂಡವಾಳ ಹೂಡಿಕೆ (ಯೋಜನೆ) ಇದರಡಿ ಕೆಳಗಿನಂತೆ ಭರಿಸುವುದು.

i) 5465-01-190-1-05-133– SDP (P) – ರೂ.25.00 ಕೋಟಿಗಳು

ii) 5465-01-190-1-05-211– Investment (P) – ರೂ.7.82.00 ಕೋಟಿಗಳು

3. ಮೇಲ್ಕಂಡ ಬಿಡುಗಡೆಯನ್ನು ಬುಕ್ ಅಡ್‌ಜಸ್ಟ್‌ಮೆಂಟ್ ಮೂಲಕ ಪ್ರಧಾನ ಲೆಕ್ಕ ಶೀರ್ಷಿಕೆ 5465 ಇದರಡಿ ಲೆಕ್ಕ ಹೊಂದಾಣಿಕೆ ಮಾಡಿ ಬಂಡವಾಳ ಜಮಾ ಲೆಕ್ಕಶೀರ್ಷಿಕೆ 4,000 ಭೂ ಮಾರಾಟ ಇದಕ್ಕೆ 2010-11ನೇ ಸಾಲಿನ ಲೆಕ್ಕ ಹೊಂದಾಣಿಕೆಯಲ್ಲಿ ಮಹಾಲೇಖಪಾಲಕರು ಕೈಗೊಳ್ಳುವುದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1852 ವೆಚ್ಚ-1/10 ದಿನಾಂಕ 01-12-2010ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ. ಆರ್. 40

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ** : ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: 32 ರಾಅವಿ 2004, ದಿನಾಂಕ 20-03-2007
2) ಸರ್ಕಾರದ ಆದೇಶ ಸಂಖ್ಯೆ: 32 ರಾಅವಿ 2004, ದಿನಾಂಕ 07-05-2007
3) ಸರ್ಕಾರದ ಪತ್ರ ಸಂಖ್ಯೆ: ಮೂಅಇ 23 ರಾಅವಿ 2008, ದಿನಾಂಕ 20-12-2008
4) ಸರ್ಕಾರದ ಆದೇಶ ಸಂಖ್ಯೆ: 23 ರಾಅವಿ 2008, ದಿನಾಂಕ 23-05-2009
5) ಸರ್ಕಾರದ ಆದೇಶ ಸಂಖ್ಯೆ: 23 ರಾಅವಿ 2008, ದಿನಾಂಕ 27-11-2009
6) ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರ ದಿನಾಂಕ 10-03-2010ರ ಪತ್ರ ಸಂಖ್ಯೆ: DC/PA/CR-52/2009-10.
7) ಸರ್ಕಾರದ ಆದೇಶ ಸಂಖ್ಯೆ: 23 ರಾಅವಿ 2008, ದಿನಾಂಕ 26-03-2010
8) ಸರ್ಕಾರದ ಆದೇಶ ಸಂಖ್ಯೆ: 23 ರಾಅವಿ 2008, ದಿನಾಂಕ 30-03-2010
9) ವಿಶೇಷ ಜಿಲ್ಲಾಧಿಕಾರಿಗಳು, ಕೆಐಎಡಿಬಿ ಇವರ ದಿನಾಂಕ 8-9-2010ರ ಆದೇಶ ಸಂಖ್ಯೆ: KIADB/ಕೇಂ.ಕವಿಜೆ/1849-(2)10/88-2010-11.
10) ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ದಿನಾಂಕ 8-10-2010ರ ಪತ್ರ ಸಂಖ್ಯೆ: ACCTS/AIRPORT/CR-27/2010-11.
11) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 142 ಬಿಆರ್‌ಎಸ್ 2010, ದಿನಾಂಕ 29-11-2010.

**ಪ್ರಸ್ತಾವನೆ :**

ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರವು (AAI) ತಯಾರಿಸಿ ಅನುಷ್ಠಾನಗೊಳಿಸಲು ನಿರ್ಧರಿಸಿದ ದೀರ್ಘಾವಧಿ ಕ್ರಿಯಾ ಯೋಜನೆ ಪ್ರಕಾರ 650 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿ ಪಡಿಸಲು ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಇದರಂತೆ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಸದರಿ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ. 20.00 ಕೋಟಿಗಳನ್ನು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

3. ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಹಾಗೂ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಏರ್ಪಟ್ಟ ಸಭೆಯ ನಿರ್ಧಾರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣಕ್ಕೆ ಅಗತ್ಯವಾದ ಭೂಸ್ವಾಧೀನ ವೆಚ್ಚದ ಅರ್ಧ ಪಾಲನ್ನು ಕೆಐಎಡಿಬಿಯಿಂದ ಭರಿಸುವಂತೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿ, ಭೂಮಾಲೀಕರಿಗೆ ಪರಿಹಾರ ಪಾವತಿಗಾಗಿ ರೂ. 3.31 ಕೋಟಿಗಳನ್ನು ಧಾರವಾಡ ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡುವಂತೆ ಹಾಗೂ ಇದಕ್ಕೆ ಬದಲಾಗಿ ಕೆಐಎಡಿಬಿ 60 ಎಕರೆ ಭೂ ಪ್ರದೇಶವನ್ನು ಅವರ ವಾಣಿಜ್ಯಾತ್ಮಕ ಅಭಿವೃದ್ಧಿಗಾಗಿ ನೀಡುವುದಾಗಿ ತಿಳಿಸಲಾಗಿದ್ದಿತು. ವಿಶೇಷ ಜಿಲ್ಲಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಕೆಐಎಡಿಬಿ/ಕೇಂಕ.ಕ/ಭೂಸ್ವಾ/1849(2)/11190/08–09, ದಿನಾಂಕ 02–01–09ರಲ್ಲಿ ಉಲ್ಲೇಖಿಸಿರುವಂತೆ ಇದರನುಸಾರ ದಿನಾಂಕ 29–12–2008ರ ಕೆಐಎಡಿಬಿಯ ಅದೇಶ ಸಂಖ್ಯೆ: KIADB/ಕೇಂಕ/ಭೂಸ್ವಾ/1849(2)11084/08–09ರಲ್ಲಿ ರೂ. 3.31 ಕೋಟಿಗಳನ್ನು KIADBಯು ಧಾರವಾಡ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿದೆ ಎಂದು ವರದಿ ಮಾಡಲಾಗಿದೆ.

4. ಮೇಲೆ ಕ್ರ.ಸಂಖ್ಯೆ. (4)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 23–05–2009ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಯ ವ್ಯಾಪ್ತಿಯಲ್ಲಿ ಬರುವ ಕೈಗಾರಿಕಾ ಪ್ರದೇಶದ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರ.ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 27–11–2009ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅವಶ್ಯವಿರುವ ರೂ. 25.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

6. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಪತ್ರ ದಿನಾಂಕ 10–03–2010ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ಈಗಾಗಲೇ ಬಿಡುಗಡೆ ಮಾಡಿರುವ ಒಟ್ಟು ಮೊತ್ತ ರೂ. 45.00 ಕೋಟಿಗಳು ಸಂಪೂರ್ಣವಾಗಿ ಬಳಕೆಯಾಗಿರುವುದರಿಂದ ಅವಶ್ಯವಿರುವ ರೂ. 50.00 ಕೋಟಿಗಳನ್ನು ಹೆಚ್ಚುವರಿಯಾಗಿ ಕೂಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

7. ಮೇಲೆ ಕ್ರ.ಸಂಖ್ಯೆ (7)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 26–03–2010ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

8. ಮೇಲೆ ಕ್ರ.ಸಂಖ್ಯೆ (8) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 30–3–2010ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನ ಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 30.00 ಕೋಟಿಗಳನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05 ಸಣ್ಣ ವಿಮಾನಗಳ ಅಭಿವೃದ್ಧಿ ಇದರಡಿ ಲಭ್ಯವಿದ್ದ ಮೊತ್ತವು ಹಾಗೂ ಇತರೆ ಲೆಕ್ಕಶೀರ್ಷಿಕೆಗಳಿಂದ ಪುನರ್ ವಿನಿಯೋಗದ ಮೂಲಕ ಬಿಡುಗಡೆ ಮಾಡಲಾಗಿದೆ.

9. ಮೇಲೆ ಕ್ರ.ಸಂ. 9ರಲ್ಲಿ ಓದಲಾದ ಆದೇಶದಲ್ಲಿ ವಿಮಾನ ನಿಲ್ದಾಣಕ್ಕಾಗಿ ಸ್ವಾಧೀನಪಡಿಸಿಕೊಂಡಿರುವ ಜಮೀನಿಗೆ ಪರಿಹಾರ ಪಾವತಿಸಲು ರೂ. 50.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

10. ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಪತ್ರದಲ್ಲಿ ರೂ. 143.56 ಕೋಟಿ ಪರಿಹಾರವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದ್ದು, ಅಧಿಸೂಚನೆ ಹೊರಡಿಸಿರುವ ಬಾಕಿ ಜಮೀನಿಗೆ ಸಂಬಂಧಿಸಿದಂತೆ ಪರಿಹಾರ ಧನವನ್ನು ನೀಡಲು ರೂ. 323.46 ಕೋಟಿಗಳು ಅವಶ್ಯವಿದೆ ಎಂದು ಜಿಲ್ಲಾಧಿಕಾರಿ, ಧಾರವಾಡರವರು ತಿಳಿಸಿ ಈ ಭೂ ಮಾಲೀಕರಿಗೆ ಪರಿಹಾರ ಪಾವತಿಸಲು ತ್ವರಿತವಾಗಿ ರೂ. 100.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

11. ಧಾರವಾಡ ಜಿಲ್ಲಾಧಿಕಾರಿಗಳ ಪತ್ರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪಾವತಿಸಬೇಕಾದ ಪರಿಹಾರದ ಬಾಕಿ ಮೊತ್ತ ರೂ. 100.00 ಕೋಟಿಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದಿತು.

12. ಮೇಲೆ ಕ್ರ.ಸಂಖ್ಯೆ (11) ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶ ದಿನಾಂಕ 29–11–2010 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗೆ ಅಗತ್ಯವಾದ ರೂ. 8,000.00 ಲಕ್ಷಗಳನ್ನು ಈ ಕೆಳಕಾಣಿಸಿದ ಲೆಕ್ಕ ಶೀರ್ಷಿಕೆಯಿಂದ ಮರುಹೊಂದಾಣಿಕೆ ಮೂಲಕ ಭರಿಸಲು ಅನುಮತಿಯನ್ನು ನೀಡಲಾಗಿರುತ್ತದೆ.

5465-01-190-3-05 (P) Cost sharing for new projects-211 Investments

ಅಂತೆಯೇ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 23 ರಾಅವಿ 2008, ಬೆಂಗಳೂರು, ದಿನಾಂಕ: 04–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿಕೊಂಡಿರುವ ಬಾಕಿ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 8,000–00 ಲಕ್ಷಗಳನ್ನು (ರೂ. ಎಂಟು ಸಾವಿರ ಲಕ್ಷಗಳು) ಮಾತ್ರ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465-01-190-3-05 (P) Cost sharing for new projects-211 Investments. ಇದರಡಿ ಲಭ್ಯವಿರುವ ಮೊತ್ತದಿಂದ ಈ ಕೆಳಕಾಣಿಸಿದ ಲೆಕ್ಕ ಶೀರ್ಷಿಕೆಗೆ ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾಗಿದೆ.

5465-01-190-1-05 (P) ಸಣ್ಣ ವಿಮಾನಗಳ ಅಭಿವೃದ್ಧಿ –211–ಬಂಡವಾಳ ಹೂಡಿಕೆ.

3) ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ, ಧಾರವಾಡ ಇವರು ಪೇಯಿಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯುವುದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 142 ಬಿಆರ್ಎಸ್ 2010 ದಿನಾಂಕ 29–11–2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1831 ವೆಚ್ಚ–I/2010 ದಿನಾಂಕ 30–11–2010ರ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಎ. ಬಾಬುರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. ನಂ. 41

## EDUCATION SECRETARIAT

**Sub :-** Issuing income certificates for claiming interest subsidy under Educational Loans-reg.

**Read :-** D.O. No. 11-4/2010-U.5 dated 21-04-2010 from Sri Sunil Kumar, Additional Secretary, Department of Higher Education, Ministry of Human Resource Development, Government of India addressed to Chief Secretary.

***

**Preamble:-**

Government of India has announced an interest subsidy for the period of moratorium on Education loan taken by students from economically weaker section from scheduled banks under the Education loan scheme to pursue Technical/Professional Education studies in India. The question of designating appropriate authority or authorities who are competent to issue Income Certificate to these students belonging to economically weaker section with an annual gross parental/family income with an upper limit of Rs. 4.5 lacs from all sources was under consideration.

**Government Order No.: ED 70 HTP 2010 (P), Bangalore, Dated 10-12-2010**

In view of the above, the State Government hereby designates the concerned taluk Tahashildars to issue the Income Certificates as per rules.

By Order and in the name of the Governor of Karnataka
**I. F. Magi**
Special Officer & Ex-officio
Under Secretary to Government (Planning)
Education Department

PR. No. 42

## EDUCATION SECRETARIAT

### ERRATA

No. ED 109 PTI 2010, Bangalore, Dated 8th December 2010

In the Government Order No. ED 125 PTI 2003, dated 16-08-2003, after para 4(2) the following shall be added viz:-

"4(3). This order shall came into force prospectively that is w.e.f. from 16-08-2003"

By Order and in the name of the Governor of Karnataka
**M. N. Somashekhar**
Under Secretary to Government
Education Department

PR. No. 43

## ಶಿಕ್ಷಣ ಸಚಿವಾಲಯ

**ವಿಷಯ** : ಸಾಕ್ಷರ ಭಾರತ 2012ರ ಕಾರ್ಯಕ್ರಮ ಅನುಷ್ಠಾನ ಕುರಿತು

**ಓದಲಾಗಿದೆ** :
1) ಕೇಂದ್ರ ಸರ್ಕಾರದ ಮಾನವಸಂಪನ್ಮೂಲ ಇಲಾಖೆ, ನವದೆಹಲಿ ಅವರ ಪತ್ರ ಸಂಖ್ಯೆ: ಎಫ್, 18–01/2009, ಎನ್.ಎಲ್.ಎಂ.–2009, ದಿನಾಂಕ 24–12–2009.
2) ಸರ್ಕಾರದ ಆದೇಶ ಸಂಖ್ಯೆ: ಇಡಿ 378 ಎಂಸಿಡಿ 2009, ದಿನಾಂಕ 12–03–2010.
3) ನಿರ್ದೇಶಕರು, ಲೋಕ ಶಿಕ್ಷಣ ಅವರ ಪತ್ರ ಸಂಖ್ಯೆ: ಡಿಎಂಇ:ಸಾ.ಭಾ.–43/2009–10, ದಿನಾಂಕ 18–03–2010.

***

**ಪ್ರಸ್ತಾವನೆ :**

ಸಾಕ್ಷರ ಭಾರತ ಕಾರ್ಯಕ್ರಮವು ಕೇಂದ್ರ ಸರ್ಕಾರದ 18 ಪ್ರಧಾನ ಕಾರ್ಯಕ್ರಮಗಳಲ್ಲಿ ಒಂದಾಗಿದ್ದು ರಾಷ್ಟ್ರದ 17 ರಾಜ್ಯಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು ಅದರಲ್ಲಿ ಕರ್ನಾಟಕ ರಾಜ್ಯವು ಒಂದಾಗಿದೆ. ಈ ಯೋಜನೆಯನ್ನು ರಾಜ್ಯ ಸರ್ಕಾರದ ಸಹಭಾಗಿತ್ವದಲ್ಲಿ ಅನುಷ್ಠಾನಗೊಳಿಸಬೇಕಾಗಿದೆ.

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯದಲ್ಲಿ ಮಹಿಳಾ ಸಾಕ್ಷರತೆ ಪ್ರಮಾಣ ಶೇ. 50ಕ್ಕಿಂತ ಕಡಿಮೆ ಇರುವ 16 ಜಿಲ್ಲೆಗಳಲ್ಲಿ ಅಂದರೆ ಬೆಂಗಳೂರು (ಗ್ರಾಮಾಂತರ) ಬೆಳಗಾವಿ, ಹಾವೇರಿ, ಬಳ್ಳಾರಿ, ಚಿತ್ರದುರ್ಗ, ಬಾಗಲಕೋಟೆ, ತುಮಕೂರು, ರಾಯಚೂರು, ಕೊಪ್ಪಳ, ಬೀದರ್, ಚಾಮರಾಜನಗರ, ಮೈಸೂರು, ಗದಗ, ಹಾಸನ, ಕೋಲಾರ, ಬಿಜಾಪುರ ಈ ಜಿಲ್ಲೆಗಳ 107 ತಾಲ್ಲೂಕುಗಳಲ್ಲಿನ 3451 ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ 15 ವಯೋಮಿತಿ 36 ಲಕ್ಷ ಅನಕ್ಷರಸ್ಥರನ್ನು ಸಾಕ್ಷರಸ್ಥನ್ನಾಗಿಸುವ ಸಾಕ್ಷರ ಭಾರತ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಾಗೂ ಇವುಗಳ ಜೊತೆಗೆ ವಿಭಜಿತ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಸೇರಿದಂತೆ ಒಟ್ಟು 18 ಜಿಲ್ಲೆಗಳಲ್ಲಿ ಸಾಕ್ಷರ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ ಸಾಕ್ಷರ ಭಾರತ ಕಾರ್ಯಕ್ರಮವನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ವಿವಿಧ ಹಂತಗಳಲ್ಲಿ ಸಮಿತಿಗಳನ್ನು ರಚಿಸಿ ಅವುಗಳಿಗೆ ನಿರ್ದಿಷ್ಠ ಜವಾಬ್ದಾರಿಗಳನ್ನು ವಹಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರ ಸಾಕ್ಷರ ಭಾರತ್-2012ರ ಕಾರ್ಯಕ್ರಮಕ್ಕೆ ನೀಡಿರುವ ಆಡಳಿತಾತ್ಮಕ ಅನುಮೋದನೆಯ ಅನ್ವಯ ಕೇಂದ್ರ ಸರ್ಕಾರದ ಪಾಲು ಪ್ರಥಮ ಕಂತು ರೂ. 18,44,41,275/-ಗಳ ಅನುದಾನ ಬಿಡುಗಡೆ ಮಾಡಿರುತ್ತಾರೆ. ಸದರಿ ಅನುದಾನ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರದ ವತಿಯಿಂದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಲ್ಲೇಶ್ವರಂ ಶಾಖೆಯಲ್ಲಿ ತೆರೆಯಲಾಗಿರುವ ಮೂಲ ಜಮಾ ಖಾತೆ ನಂ. 31000896425ಗೆ ದಿನಾಂಕ 02-03-2010ರಲ್ಲಿ ರೂ. 18,44,41,275 ಗಳು ಜಮಾ ಆಗಿರುತ್ತದೆ ಎಂದು ತಿಳಿಸಲಾಗಿದೆ. ಕೇಂದ್ರ ಸರ್ಕಾರ ಶೇ 75% ಮತ್ತು ರಾಜ್ಯ ಸರ್ಕಾರ ಶೇ 25%ರ ಅನುದಾನ ಭರಿಸುವುದಾಗಿದ್ದು ಮೊದಲನೇ ಕಂತಿನ ರಾಜ್ಯ ಸರ್ಕಾರದ ಪಾಲು ರೂ. 6,14,80,425/-ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡುವಂತೆ ನಿರ್ದೇಶಕರು ಲೋಕ ಶಿಕ್ಷಣ ಅವರು ಕೋರಿರುತ್ತಾರೆ.

ಮೇಲೆ ವಿವರಿಸಿರುವ ವಿಷಯಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 378 ಎಂಸಿಡಿ 2009 (ಭಾಗ) ಬೆಂಗಳೂರು, ದಿನಾಂಕ: 23-10-2010**

**[ಇಡಿ: 123: ಸ್ವೀಮರ (ಯುನಿಕ್) 2010, ದಿನಾಂಕ 23-10-2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

1. ಸಾಕ್ಷರ ಭಾರತ್ 2012 ಕಾರ್ಯಕ್ರಮವನ್ನು 2010-11ನೇ ಸಾಲಿನಿಂದ ಯಶಸ್ವಿಯಾಗಿ ಅನುಷ್ಠಾನಗೊಳಿಸಲು ನಿರ್ದೇಶಕರು, ಲೋಕ ಶಿಕ್ಷಣ ಇಲಾಖೆ, ಇವರಿಗೆ ಅನುಮತಿ ನೀಡಿದೆ.

2. ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ರಾಜ್ಯದ ಪಾಲಿನ ಅನುದಾನವನ್ನು ಯೋಜನಾ ಲೆಕ್ಕ ಶೀರ್ಷಿಕೆ 2202-04-001-0-05-101 ಸಹಾಯಾನುದಾನದಡಿಯಲ್ಲಿ ಒದಗಿಸಿರುವ ರೂ. 6.15 ಕೋಟಿಗಳ ಅನುದಾನದಲ್ಲಿ ಭರಿಸಲು ಅನುಮತಿಸಿದೆ ಹಾಗೂ ಈ ಸಂಬಂಧ ಮೊದಲೆರಡು ಕಂತುಗಳ ಒಟ್ಟಾರೆ ಅನುದಾನ (ಹಿಂದಿನ ಬಿಡುಗಡೆಯೂ ಸೇರಿ) ರೂ. 3.75 ಕೋಟಿಗಳನ್ನು ಬಿಡುಗಡೆ ಮಾಡಿದೆ.

3. ಖರೀದಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಪಾರದರ್ಶಕ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುವುದು

4. ಕಾರ್ಯಕ್ರಮ ತ್ವರಿತ ಮತ್ತು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅಗತ್ಯ ನಿರ್ಣಯಗಳನ್ನು ತೆಗೆದುಕೊಳ್ಳಲು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಕಾರ್ಯಕಾರಿ ಸಮಿತಿಗೆ ಅಧಿಕಾರ ನೀಡಲಾಗಿದೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 261 ವೆಚ್ಚ 8/2010 ದಿನಾಂಕ 12-05-2010 ಹಾಗೂ ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 64 ಎಂಅಂಡ್ಇ 2009, ದಿನಾಂಕ 01-07-2010ರ ಹಾಗೂ ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ/390/2010ರ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 44

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ದಿವಂಗತ ಪದ್ಮಭೂಷಣ ಡಾ॥ ಪಂಡಿತ್ ಪುಟ್ಟರಾಜ ಗವಾಯಿಯವರ ಸ್ಮಾರಕ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ** : ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಮು.ಮ/128/ಅಕಾ/2010, ದಿನಾಂಕ 21-09-2010.

***

**ಪ್ರಸ್ತಾವನೆ :**

ಗದಗದಲ್ಲಿ ಪದ್ಮಭೂಷಣ ದಿವಂಗತ ಡಾ॥ ಪಂಡಿತ್ ಪುಟ್ಟರಾಜ ಗವಾಯಿಯವರ ಸ್ಮಾರಕ ನಿರ್ಮಾಣಕ್ಕೆ ರೂ. 5.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸಬೇಕೆಂದು ಸರ್ಕಾರವು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಸ್ಮಾರಕಕ್ಕೆ ರೂ. 5.00 ಕೋಟಿಯನ್ನು ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 61 ಸ್ಮಾಪ್ರನಿ 2010, ಬೆಂಗಳೂರು, ದಿನಾಂಕ 06-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗದಲ್ಲಿ ಪದ್ಮಭೂಷಣ ದಿವಂಗತ ಡಾ॥ ಪಂಡಿತ್ ಪುಟ್ಟರಾಜ ಗವಾಯಿಯವರ ಸ್ಮಾರಕ ನಿರ್ಮಾಣಕ್ಕೆ ರೂ. 5.00 ಕೋಟಿಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ, ಗದಗ ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

1) ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ/ತಾಂತ್ರಿಕ ಅನುಮೋದನೆಯನ್ನು ಪಡೆದು ಕಾಮಗಾರಿ ಕೈಗೊಳ್ಳುವುದು.
2) ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರಂತೆ ಕ್ರಮ ಕೈಗೊಳ್ಳತಕ್ಕದು.
3) ಕಾಮಗಾರಿಯನ್ನು ಪೂರ್ಣಗೊಳಿಸಲು ಸಮಯ ನಿಗದಿ ಪಡಿಸಿಕೊಂಡು ಆ ಸಮಯದೊಳಗೆ ಪೂರ್ಣಗೊಳಿಸುವುದು.
4) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು

5) ಕಾಮಗಾರಿಯ ಅಂದಾಜು ಪಟ್ಟಿಯನ್ನು ರೂ. 5.00 ಕೋಟಿಗಳಿಗೆ ನಿಗದಿಪಡಿಸಿಕೊಳ್ಳುವುದು ಮತ್ತು ಪ್ರಗತಿಯ ಅನುಸಾರ ಹಣ ಬಿಡುಗಡೆ ಮಾಡುವುದು.

6) ಕಾಮಗಾರಿಗೆ ಅನುದಾನ ಉಪಯೋಗಿಸಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.

ಈ ಅನುದಾನವನ್ನು 2010-11ನೇ ಸಾಲಿನ ಲೆಕ್ಕ ಶೀರ್ಷಿಕೆ 2205-00-102-4-31-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 20-11-2010ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 706 ವೆಚ್ಚ-7/2010ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

ಪಿ.ಆರ್. ನಂ. 45

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಒಂದು ಕಣವನ್ನು (Thresh yard) ನಿರ್ಮಿಸುವುದು ಮತ್ತು ಸರ್ಕಾರಿ ಅನುದಾನಿತ ಶಾಲೆಗಳ ಆಸ್ತಿಗಳಿಗೆ ರಕ್ಷಣಾ ಗೋಡೆಯನ್ನು ನಿರ್ಮಿಸುವ ಬಗ್ಗೆ.

**ಪ್ರಸ್ತಾವನೆ :**

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ನೋಂದಾಯಿತ ಕೆಲಸಗಾರರ ಕುಟುಂಬಗಳ ಬೇಡಿಕೆಗೆ ಅನುಗುಣವಾಗಿ ಪ್ರತಿ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ಕನಿಷ್ಠ 100 ದಿನಗಳ ಖಾತರಿ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ನೀಡುವುದು ಮತ್ತು ದೀರ್ಘಕಾಲ ಬಾಳಿಕೆ ಬರುವ ಆಸ್ತಿಗಳನ್ನು ಸೃಜಿಸುವುದು ಮತ್ತು ಗ್ರಾಮೀಣ ಬಡವರ ಜೀವನೋಪಾಯದ ಸಂಪನ್ಮೂಲವನ್ನು ಬಲಪಡಿಸುವುದು ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ. ಸದರಿ ಯೋಜನೆಯಡಿ ಆದ್ಯತೆಯ ಮೇಲೆ ಒಂಬತ್ತು ವಿಧದ ಪ್ರವರ್ಗದ ಕಾಮಗಾರಿಗಳನ್ನು ತೆಗೆದುಕೊಳ್ಳಲು ತಿಳಿಸಲಾಗಿರುತ್ತದೆ. ಸದರಿ ಯೋಜನೆಯಡಿ ಗ್ರಾಮ ಪಂಚಾಯಿತಿಗಳಲ್ಲಿ ರೈತರಿಗೆ ಅನುಕೂಲವಾಗುವಂತೆ ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಒಂದು ಕಣವನ್ನು ನಿರ್ಮಿಸಲು ಹೆಚ್ಚಿನ ಬೇಡಿಕೆಯಿದ್ದು, ಪ್ರತಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಲಭ್ಯವಿರುವ ಸರ್ಕಾರದ ಜಾಗವನ್ನು ಬಳಸಿಕೊಂಡು 150-200 ಅಡಿ ವ್ಯಾಸವುಳ್ಳ ಒಂದು ಕಣವನ್ನು ನಿರ್ಮಿಸಲು ತೀರ್ಮಾನಿಸಲಾಗಿರುತ್ತದೆ. ಸರ್ಕಾರಿ ಅನುದಾನಿತ ಶಾಲೆಗಳಿಗೆ ರಕ್ಷಣಾ ಗೋಡೆಗಳನ್ನು ನಿರ್ಮಿಸುವ ಕಾಮಗಾರಿಗಳಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಸದರಿ ಕಾಮಗಾರಿಗಳನ್ನು ಯೋಜನೆಯಡಿ ಲಭ್ಯವಿರುವ ಅನುದಾನವನ್ನು ಬಳಸಿಕೊಂಡು ಅನುಷ್ಠಾನಗೊಳಿಸಲು ತೀರ್ಮಾನಿಸಲಾಗಿರುತ್ತದೆ. ಮೇಲೆ ಸೂಚಿಸಲಾದ ಕಣವನ್ನು ನಿರ್ಮಿಸುವ ಕಾಮಗಾರಿಯನ್ನು ಮತ್ತು ಸರ್ಕಾರಿ ಅನುದಾನಿತ ಶಾಲೆಗಳ ಆಸ್ತಿಗಳಿಗೆ ರಕ್ಷಣಾ ಗೋಡೆಯನ್ನು ನಿರ್ಮಿಸುವ ಕಾಮಗಾರಿಯನ್ನು ಯೋಜನೆಯಡಿ ತಿಳಿಸಲಾದ ಆದ್ಯತಾ ಕಾಮಗಾರಿಗಳ 5ನೇ ಪ್ರವರ್ಗದಡಿ ತೆಗೆದುಕೊಳ್ಳಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 110 ಉಖಾಯೋ 2009 ಬೆಂಗಳೂರು ದಿನಾಂಕ 03-12-2010**

ಪ್ರಸ್ತಾವನೆಯಲ್ಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಈಗಾಗಲೇ ನಿಗದಿ ಪಡಿಸಲಾದ ಕಾಮಗಾರಿಗಳ ಜೊತೆಗೆ ಈ ಕೆಳಕಂಡ ಕಾಮಗಾರಿಗಳನ್ನು ತೆಗೆದುಕೊಳ್ಳಲು ಅವಕಾಶ ಕಲ್ಪಿಸಿದೆ. ಸದರಿ ಕಾಮಗಾರಿಗಳನ್ನು ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಂಡು ಅನುಮೋದನೆ ಪಡೆದು ಅನುಷ್ಠಾನಗೊಳಿಸಲು ಆದೇಶಿಸಿದೆ. ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸಿ ಅನುಷ್ಠಾನಗೊಳಿಸಬೇಕಾಗಿದೆ.

1. ರೈತರಿಗೆ ಅನುಕೂಲವಾಗಲು ಪ್ರತಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಲಭ್ಯವಿರುವ ಸರ್ಕಾರಿ ಜಾಗವನ್ನು ಬಳಸಿಕೊಂಡು ಸುಮಾರು 150-200 ಅಡಿ ವ್ಯಾಸವುಳ್ಳ ಅಥವಾ ಆ ಗ್ರಾಮದ ಕೃಷಿ ಚಟುವಟಿಕೆಗಳಿಗೆ ಅಗತ್ಯವೆನಿಸಬಹುದಾದ ಅಳತೆಯುಳ್ಳ ಒಂದು ಕಣವನ್ನು ನಿರ್ಮಿಸಿ ಅನುಷ್ಠಾನಗೊಳಿಸುವುದು ಸದರಿ ಕಾಮಗಾರಿಯನ್ನು ಅನುಷ್ಠಾನಗೊಳಿಸುವಾಗ ಯೋಜನೆಯಡಿ ನಿಗದಿಪಡಿಸಲಾದ ಕೂಲಿ ಮತ್ತು ಸಾಮಗ್ರಿಗಳ 60:40 ರ ಅನುಪಾತವನ್ನು ಕಡ್ಡಾಯವಾಗಿ ಪಾಲನೆ ಮಾಡುವುದು.
2. ಗ್ರಾಮ ಪಂಚಾಯಿತಿಗಳಲ್ಲಿ ಇರುವ ಸರ್ಕಾರಿ ಅನುದಾನಿತ ಶಾಲೆಗಳಿಗೆ ರಕ್ಷಣಾ ಗೋಡೆಗಳನ್ನು ನಿರ್ಮಿಸುವುದು ಮತ್ತು ಕಾಮಗಾರಿಯನ್ನು ನಿರ್ವಹಿಸುವಾಗ ಕೂಲಿ ಮತ್ತು ಸಾಮಗ್ರಿಗಳ 60:40 ರ ಅನುಪಾತವನ್ನು ಕಡ್ಡಾಯವಾಗಿ ಪಾಲನೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಎಸ್. ಪ್ರಸನ್ನಕುಮಾರ್**

ನಿರ್ದೇಶಕರು,

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 46

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಅರ್ಜುನ ಗಂಗಾರಾಂ ರಾಥೋಡ್ ನೋಟರಿ, ಬಿಜಾಪುರ ಇವರ ಕರ್ತವ್ಯ ನಿರ್ವಹಣೆ – ಶಿಸ್ತು ಕ್ರಮ

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ ಸಿಪಿಎನ್ 3436/08 ದಿನಾಂಕ: 17–6–2008, ಪತ್ರ ಸಂಖ್ಯೆ ಸಿಪಿಎನ್ 163/09 ದಿನಾಂಕ: 7–1–2009
2. ಸರ್ಕಾರದ ಪತ್ರ ಸಂಖ್ಯೆ: ಲಾ 30 ಎಲ್‌ಸಿಎಲ್ 07 ದಿನಾಂಕ 4–8–2008 ಮತ್ತು ದಿನಾಂಕ: 10–12–2008
3. ಸರ್ಕಾರದ ಪತ್ರ ಸಂಖ್ಯೆ: ಲಾ 80 ಎಲ್‌ಸಿಎಲ್ 09 ದಿನಾಂಕ 18–5–2009, 6–1–2010
4. ನೋಟರಿಯವರ ಹೇಳಿಕೆ ದಿನಾಂಕ: 25–6–2009
5. ಕಾರಣ ಕೇಳುವ ನೋಟೀಸು ಪತ್ರ ಸಂಖ್ಯೆ:ಲಾ 80 ಎಲ್‌ಸಿಎಲ್ 09 ದಿನಾಂಕ: 10–9–2009
6. ನೋಟರಿಯವರ ಹೇಳಿಕೆ ದಿನಾಂಕ: 11–02–2010
7. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ: ಸಿಪಿಎನ್ 1042 ದಿನಾಂಕ: 5–3–2010
8. ನೋಟರಿಯವರ ಮನವಿ ದಿನಾಂಕ: 26–3–2010
9. ಸರ್ಕಾರದ ಪತ್ರ ಸಂಖ್ಯೆ:ಲಾ 80 ಎಲ್‌ಸಿಎಲ್ 09 ದಿನಾಂಕ: 22–7–2010
10. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ: ಕಿಘ ಓ.ತ. 3554/10 ದಿನಾಂಕ: 26/27–8–2010

**ಪ್ರಸ್ತಾವನೆ :**

ಶ್ರೀ ಅರ್ಜುನ ಗಂಗಾರಾಂ ರಾಥೋಡ್, ನೋಟರಿ, ಬಿಜಾಪುರ ಇವರು 2004ನೇ ಸಾಲಿನಲ್ಲಿ ಓಟ ಡಿಜಣಣಡಿಟ ಸಲ್ಲಿಸಿ ತದನಂತರದ ಸಾಲುಗಳಲ್ಲಿ ನೋಟರಿ ನಿಯಮ 14 ಹಾಗೂ 11ರನ್ವಯ ಕ್ರಮವಹಿಸಿರುವುದಿಲ್ಲವಾದ್ದರಿಂದ ಈ ಬಗ್ಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರರವರಿಂದ ವರದಿಯನ್ನು ಸರ್ಕಾರದ ದಿನಾಂಕ: 13–5–2008ರ ಪತ್ರ ಸಂಖ್ಯೆ: ಲಾ 30 ಎಲ್‌ಸಿಎಲ್ 2007ರಲ್ಲಿ ಕೋರಲಾಗಿತ್ತು. ಅದರಂತೆ 2005 ಮತ್ತು 2006ನೇ ಸಾಲುಗಳ ರಿಟರ್ನ್ಸ್ ಹಾಗೂ ನೋಟರಿ ರಿಜಿಸ್ಟರ್ ಅನ್ನು ತಪಾಸಣೆಗೆ ಸಲ್ಲಿಸಿರುವುದಿಲ್ಲ ಎಂದು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ಉಲ್ಲೇಖಿತ (1)ರ ದಿನಾಂಕ: 17–6–2008ರ ಪತ್ರದಲ್ಲಿ ತಿಳಿಸಿದ್ದರ ಮೇರೆಗೆ ಉಲ್ಲೇಖಿತ (2)ರ ದಿನಾಂಕ: 4–8–2008 ಮತ್ತು 10–12–2008ರ ಪತ್ರಗಳಲ್ಲಿ ನೋಟರಿಯರಿಗೆ ಲಿಖಿತ ಹೇಳಿಕೆಯನ್ನು ನೀಡುವಂತೆ ಕೋರಲಾಗಿತ್ತು, ಅವರಿಂದ ಲಿಖಿತ ಉತ್ತರ ಬಾರದಿದ್ದರಿಂದ ಸದರಿ ಪತ್ರವನ್ನು ಪುನ: ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ ಕಛೇರಿಯ ಪ್ರೋಸೆಸ್ ವಿಭಾಗದಿಂದ ಜಾರಿ ಮಾಡಲಾದ ಪ್ರತಿಯನ್ನು ದಿನಾಂಕ: 27.12.2008ರಂದು ನೋಟರಿಯವರು ಖುದ್ದು ಸ್ವೀಕರಿಸಿದ್ದಾಗ್ಯೂ ಯಾವುದೇ ಲಿಖಿತ ಉತ್ತರವನ್ನು ನೀಡಿರುವುದಿಲ್ಲ. ಆದ್ದರಿಂದ, ಈ ಬಗ್ಗೆ ಉಲ್ಲೇಖಿತ (3)ರ ಸರ್ಕಾರದ ಪತ್ರದಲ್ಲಿ ನಿಗದಿತ ಕಾಲಾವಧಿಯೊಳಗೆ ರಕ್ಷಣಾ ಹೇಳಿಕೆಯನ್ನು ನೀಡುವಂತೆ ತಪ್ಪಿದಲ್ಲಿ ನೋಟರಿ ಅಧಿನಿಯಮ ಕಲಂ 10 ಮತ್ತು ನೋಟರಿ ನಿಯಮ 13 (12) (ಬಿ)(1)ರನ್ವಯ ತೀರ್ಮಾನ ತೆಗೆದುಕೊಳ್ಳಲಾಗುವುದೆಂದು ತಿಳಿಸಿದ್ದರ ಮೇರೆಗೆ ನೋಟರಿಯವರು ಉಲ್ಲೇಖಿತ (4)ರ ದಿನಾಂಕ: 25–6–2009ರ ಮನವಿಯಲ್ಲಿ 1994 ರಿಂದ ಬಿಜಾಪುರ ಇಲ್ಲಿ ನೋಟರಿಯಾಗಿ ಕೆಲಸ ಮಾಡುತ್ತಿದ್ದು, 2004ರವರೆಗೆ ನೋಟರಿ ತಪಸಣಾ ವರದಿಯನ್ನು ಸಲ್ಲಿಸಿದ್ದು, ತಾವು ಬಿಜಾಪುರ ನಗರ ಸಭೆಯ ಚುನಾಯಿತ ಸದಸ್ಯನಾಗಿದ್ದುದರಿಂದ 2005 ರಿಂದ 2008ರ ವರೆಗೆ ನೋಟರಿ ತಪಾಸಣಾ ವರದಿ ಸಲ್ಲಿಸಿರುವುದಿಲ್ಲ ಮತ್ತು ಆ ಅವಧಿಯಲ್ಲಿ ನೋಟರಿ ಕೆಲಸ ಮಾಡಿರುವುದಿಲ್ಲ ಎಂದು, ಇನ್ನು ಮುಂದೆ ನೋಟರಿ ಕರ್ತವ್ಯ ಸಾಂಘಿಕವಾಗಿ ಮಾಡಿಕೊಂಡು ಹೋಗುವುದಾಗಿ ತಿಳಿಸಿದ್ದರು. ಆದ್ದರಿಂದ ಅವರು ಸತತವಾಗಿ 5 ವರ್ಷಗಳಿಗೂ ಮೇಲ್ಪಟ್ಟ ಅವಧಿ ನೋಟರಿ ಕರ್ತವ್ಯ ನಿರ್ವಹಿಸದೇ ಇರುವ ಮಾಹಿತಿಯನ್ನು ಸಕ್ಷಮ ಪ್ರಾಧಿಕಾರ ಹಾಗೂ ಸರ್ಕಾರಕ್ಕೆ ತಿಳಿಸದೇ ಇರುವ ಮತ್ತು ರಿಜಿಸ್ಟರ್‌ಗಳನ್ನು ಪ್ರತಿ ವರ್ಷ ತಪಾಸಣೆಗೆ ಒಳಪಡಿಸಿಲ್ಲದೇ ಇರುವ ಅಂಶವನ್ನು ಹಾಗೂ ಸಾರ್ವಜನಿಕರು ಅವರಿಗೆ, ದೊರೆಯಬೇಕಾಗಿದ್ದ ಸೇವೆಯಿಂದ ವಂಚಿತರಾಗಿರುವುದನ್ನು ಗಮನಿಸಿ ಅವರ ಈ ತಪ್ಪನ್ನು ಅವರ **'ಕರ್ತವ್ಯಲೋಪ'** ಎಂದು ಪರಿಗಣಿಸಿ ನಿಯಮಾನುಸಾರ ಅವರನ್ನು ನೋಟರಿ ಕರ್ತವ್ಯದಿಂದ ಏಕೆ ತೆಗೆದುಹಾಕಬಾರದೆಂಬ ಬಗ್ಗೆ ಉಲ್ಲೇಖಿತ (5)ರ ದಿನಾಂಕ: 10–9–2009ರಲ್ಲಿ ಕಾರಣ ಕೇಳುವ ನೋಟೀಸ್‌ನಲ್ಲಿ ಲಿಖಿತ ವಿವರಣೆ ಕೋರಲಾಗಿತ್ತು ಮತ್ತು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ವಿಚಾರಣೆ ನಡೆಸಿ ವರದಿ ನೀಡುವಂತೆ ಸಹಾ ಕೋರಲಾಗಿತ್ತು. ಆದರೆ ವಿವರಣೆ ಬಾರದಿದ್ದರಿಂದ ಪುನ: ದಿನಾಂಕ: 6–1–2010ರ ಪತ್ರದಲ್ಲಿ ನೋಟರಿ ನಿಯಮಗಳನ್ವಯ ಸಕ್ಷಮ ಪ್ರಾಧಿಕಾರದ ಮುಂದೆ ಅಹವಾಲು ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆ ಮೇರೆಗೆ ಉಲ್ಲೇಖಿತ (6)ರ ದಿನಾಂಕ: 11–2–2010ರ ಮನವಿಯಲ್ಲಿ ತಾವು 2001 ರಿಂದ ಬಿಜಾಪುರ ನಗರ ಸಭೆಯ ಚುನಾಯಿತ ಸದಸ್ಯನಾಗಿದ್ದು, ನೋಟರಿ ಕರ್ತವ್ಯ ನಿರ್ವಹಿಸಿಲ್ಲದ ಮಾಹಿತಿಯನ್ನು ಸರ್ಕಾರಕ್ಕೆ ಮತ್ತು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ಗಮನಕ್ಕೆ ತರಬೇಕಾದ ಮಾಹಿತಿ ಇರಲಿಲ್ಲ ಎಂದು ತಿಳಿಸಿ ಕ್ಷಮೆಯಾಚಿಸಿ ಇನ್ನು ಮುಂದೆ ಈ ತರಹ ತಪ್ಪು ಆಗದಂತೆ ನೋಡಿಕೊಂಡು ನೋಟರಿ ಕಾರ್ಯನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ನೋಟರಿಯವರು ನೀಡಿರುವ ಈ ಮಾಹಿತಿಯನ್ನೇ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ಉಲ್ಲೇಖಿತ (7)ರ ದಿನಾಂಕ: 5–3–2010ರ ಪತ್ರದಲ್ಲಿ ಪುನರುಚ್ಚರಿಸಿ ದಿನಾಂಕ: 10–09–2009ರ ಕಾರಣ ಕೇಳುವ ನೋಟೀಸಿನಲ್ಲಿ ನಮೂದಿಸಿರುವ ಆಪಾದನೆಗಳನ್ನು ಒಪ್ಪಿಕೊಂಡಿರುವಂತಾಗಿರುತ್ತದೆ ಎಂದು ವರದಿ ಸಲ್ಲಿಸಿರುತ್ತಾರೆ.

ಏತನ್ಮಧ್ಯೆ ನೋಟರಿಯವರು ಉಲ್ಲೇಖಿತ (8)ರ ದಿನಾಂಕ: 26–3–2010ರ ಮನವಿಯಲ್ಲಿ ತಮ್ಮ ಪ್ರಮಾಣ ಪತ್ರ ನವೀಕರಿಸಿಕೊಡುವಂತೆ ಕೋರಿರುತ್ತಾರೆ. ಉಲ್ಲೇಖಿತ (7)ರ ದಿನಾಂಕ: 5–3–2010ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ನೀಡಿರುವ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಉಲ್ಲೇಖಿತ (9)ರ ದಿನಾಂಕ: 22–7–2010ರ ಪತ್ರದಲ್ಲಿ ನೋಟರಿಯವರ ದುರ್ನಡತೆ ಮತ್ತು ಅನಿಯಮಿತತೆ (ಟುಛಿಔಟಜಣಘಿಣ ಚಿಟಜ ಎಡಿಡಿಜಿರಣಟಚಿಡಿಣಥಿ) ಅಂಶದ ಬಗ್ಗೆ ನಿಯಮ 13 (12)ಬಿ ರನ್ವಯ ದಂಡನೀಯ ಕ್ರಮ ವಹಿಸುವ ಬಗ್ಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಸಕ್ಷಮ ಪ್ರಾಧಿಕಾರ, ಬಿಜಾಪುರ ಇವರಿಂದ ಮತ್ತೊಮ್ಮೆ ವಿಚಾರಣಾ ವರದಿ ಕೋರಿದ್ದರ ಮೇರೆಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಸಕ್ಷಮ ಪ್ರಾಧಿಕಾರ, ಬಿಜಾಪುರ ಇವರು ದಿನಾಂಕ: 25.8.2010ರಂದು ವಿಚಾರಣೆ ನಡೆಸಿ ನೋಟರಿಯವರು ತಮ್ಮ ಪ್ರಮಾಣೀಕೃತ ಹೇಳಿಕೆಯಲ್ಲಿ ತಮ್ಮ ತಪ್ಪುಗಳನ್ನು ಒಪ್ಪಿಕೊಂಡಿರುವುದರಿಂದ ನೋಟರಿಯವರ ಮೇಲೆ ಹೂಡಲಾಗಿರುವ ಆರೋಪಗಳು ರುಜುವಾತಾಗಿವೆಯೆಂಬ ತೀರ್ಮಾನಕ್ಕೆ ಬಂದಿರುವುದಾಗಿ ಉಲ್ಲೇಖಿತ (10)ರ ದಿನಾಂಕ: 26/27–8–2010ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ರಿಜಿಸ್ಟರ್ ಮತ್ತು ಪೂರಕ ದಾಖಲೆಗಳನ್ನು ನೋಟರಿಯವರು 2004 ರಿಂದ 2008ರವರೆಗೆ ತಪಾಸಣೆಗೆ ಪ್ರಧಾನ ಜಿಲ್ಲಾ ನ್ಯಾಯಾಧೀಶರಿಗೆ ಒಪ್ಪಿಸದೆ ಮತ್ತು ಈ ಅವಧಿಯಲ್ಲಿ ನೋಟರಿ ಕರ್ತವ್ಯ ನಿರ್ವಹಿಸದೇ, ಈ ಮಾಹಿತಿಯನ್ನು ನೋಟರಿ ನಿಯಮ 14 ಮತ್ತು 11 (5) ರನ್ವಯ ಸರ್ಕಾರಕ್ಕೆ ಮತ್ತು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರಿಗೆ ನೀಡದೇ, ಸಾರ್ವಜನಿಕರಿಗೆ ನೋಟರಿ ಸೇವೆ ಒದಗಿಸದೆ ದಿನಾಂಕ: 25–6–2009/4–3–2010 ರಂದು ತಮ್ಮ ಪ್ರಮಾಣ ಪತ್ರವನ್ನು ನವೀಕರಿಸಿಕೊಡುವಂತೆ ಕೋರಿರುವುದು, 2005ರಲ್ಲಿಯೇ ಪ್ರಮಾಣ ಪತ್ರದ ಅವಧಿ ಮುಗಿದಿದ್ದರು ನಿಗದಿತ ಅವಧಿಯಲ್ಲಿ ನವೀಕರಣಕ್ಕೆ ಅರ್ಜಿ ಸಲ್ಲಸದೇ ಬಹಳ ವಿಳಂಬವಾಗಿ ಅವಧಿ ಮುಗಿದಿದ್ದರು ದಿನಾಂಕ: 26.3.2010 ರಂದು ಮನವಿ ಸಲ್ಲಿಸಿ ನೋಟರಿಗಳ ಅಧಿನಿಯಮ ಕಲಂ 10 (ಡಿ) (ಎಫ್), ನೋಟರಿ ನಿಯಮ 8(ಬಿ)ಯನ್ನು ಪಾಲಿಸದೆ ಇರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿ ಶ್ರೀ ಅರ್ಜುನ ಗಂಗಾರಾಂ ರಾಥೋಡ್, ನೋಟರಿ, ಬಿಜಾಪುರವರ ಹೆಸರನ್ನು ನೋಟರಿ, ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 80 ಎಲ್‌ಸಿಎಲ್ 2009 ಬೆಂಗಳೂರು, ದಿನಾಂಕ 09–12–2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಅರ್ಜುನ ಗಂಗಾರಾಂ ರಾಥೋಡ್, ನೋಟರಿ, ಬಿಜಾಪುರ ಇವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10 (ಡಿ) ಮತ್ತು (ಎಫ್) ಹಾಗೂ ನೋಟರಿ ನಿಯಮಗಳು 1956ರ ನಿಯಮ 13 (12) (ಬಿ) (1) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 47

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ನಆಇ 59 ಗುಅಪ್ರಾ 2010 ಬೆಂಗಳೂರು, ದಿನಾಂಕ 09–12–2010**

ಗುಲ್ಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ–II)ಕ್ಕೆ ಸರ್ಕಾರದ ಅಂತಿಮ ಅನುಮೋದನೆಯನ್ನು ಸರ್ಕಾರದ ಆದೇಶ ಸಂಖ್ಯೆ:ನಅಇ 59 ಗುಅಪ್ರಾ 2008 ದಿನಾಂಕ: 1–12–2008ರಂದು ಹೊರಡಿಸಲಾಗಿದ್ದು, ಸದರಿ ಆದೇಶದಲ್ಲಿನ ಆದೇಶದ ಭಾಗವನ್ನು ಈ ಕೆಳಕಂಡಂತೆ ಓದಿಕೊಳ್ಳುವುದು.

**ಸರ್ಕಾರದ ಆದೇಶ ಸಂಖ್ಯೆ: ನಆಇ 59 ಗುಅಪ್ರಾ 2010 ಬೆಂಗಳೂರು, ದಿನಾಂಕ 1–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗುಲ್ಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸಂಬಂಧಿಸಿದಂತೆ, ಈ ಆದೇಶಕ್ಕೆ ಲಗತ್ತಿಸಿರುವ ಮಾದರಿ ವಲಯ ನಿಯಮಾವಳಿಗಳನ್ನು (ಅನುಬಂಧ–1) ಅಳವಡಿಸುವ ಷರತ್ತಿಗೊಳಪಟ್ಟು ಗುಲ್ಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ– II)ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅಂತಿಮ ಅನುಮೋದನೆ ನೀಡಲಾಗಿದೆ.

(1) ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಅನುಬಂಧ–1 ರಲ್ಲಿನ ಮಾದರಿ ವಲಯ ನಿಯಮಾವಳಿಗಳನ್ನು ವರದಿಯಲ್ಲಿ ಸೂಕ್ತವಾಗಿ ಅಳವಡಿಸಿಕೊಂಡು ಸದರಿ ವರದಿಗಳ 3 ಶುದ್ಧ ಪ್ರತಿಗಳನ್ನು ಸರ್ಕಾರಕ್ಕೆ ತಕ್ಷಣ ಸಲ್ಲಿಸಿ ಸರ್ಕಾರದ ಮುದ್ರೆ ಪಡೆದುಕೊಳ್ಳುವುದು

(2) ಸದರಿ ಮಾದರಿ ವಲಯ ನಿಯಮಾವಳಿಗಳನ್ನು ಪ್ರಾಧಿಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಅನ್ವಯಿಸಿಕೊಳ್ಳತಕ್ಕದ್ದು.

ಮಹಾ ಯೋಜನೆ (ಪರಿಷ್ಕೃತ–II)ಕ್ಕೆ ಅಂತಿಮ ಅನುಮೋದನೆ ಮೇಲೆ ನೀಡಿದ ಗುರುತಾಗಿ ಮಾದರಿ ವಲಯ ನಿಯಮಾವಳಿಗಳ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 48

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕುದುರೆಮುಖ ಕಬ್ಬಿಣದ ಅದಿರು ಕಂಪೆನಿಗೆ ಸೇರಿದ ಕಟ್ಟಡ ಮತ್ತು ಇತರ ಮೂಲಭೂತ ಸೌಕರ್ಯಗಳನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಿಕೊಳ್ಳಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ ಇವರಿಗೆ ಅಧಿಕಾರ ನೀಡುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: CCF(LC)/KIOCL/2009–10 ದಿನಾಂಕ: –03–2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಮಾನ್ಯ ಸರ್ವೋಚ್ಚ ನ್ಯಾಯಾಲಯದ I.A. No. 670/2001 ದಿನಾಂಕ: 30–10–2002ರ ತೀರ್ಪಿನಂತೆ ಕುದುರೆಮುಖ ಕಬ್ಬಿಣದ ಅದಿರು ಕಂಪನಿಯು ದಿನಾಂಕ: 31–12–2005ಕ್ಕೆ ಎಲ್ಲಾ ಗಣಿ

ಕಾರ್ಯಗಳನ್ನು ನಿಲ್ಲಿಸಲಾಗಿದ್ದು, ಸದರಿ ತೀರ್ಪಿನಲ್ಲಿ ತಿಳಿಸಿರುವಂತೆ ಇವರು ಕುದುರೆಮುಖ ಕಬ್ಬಿಣದ ಅದಿರು ಕಂಪೆನಿಗೆ ಸೇರಿದ ಕಟ್ಟಡ ಮತ್ತು ಇತರ ಮೂಲಭೂತ ಸೌಕರ್ಯಗಳನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದಕ್ಕೆ ಸಂಬಂಧಪಟ್ಟಂತೆ, ಸದರಿ ಕಂಪನಿಯ ಸೊತ್ತುಗಳು ಕುದುರೆಮುಖ ವನ್ಯಜೀವಿ ವಿಭಾಗ ವ್ಯಾಪ್ತಿಯಲ್ಲಿ ಬರುವುದರಿಂದ, ಈ ಸೊತ್ತುಗಳನ್ನು ಹಸ್ತಾಂತರಿಸಿಕೊಳ್ಳಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ ಇವರಿಗೆ ಅಧಿಕಾರ ನೀಡುವ ಬಗ್ಗೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 220 ಎಫ್‌ಡಬ್ಲ್ಯೂಎಲ್ 2007 ಬೆಂಗಳೂರು, ದಿನಾಂಕ 9–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕುದುರೆಮುಖ ಕಬ್ಬಿಣದ ಅದಿರು ಕಂಪೆನಿಗೆ ಸೇರಿದ ಕಟ್ಟಡ ಮತ್ತು ಇತರ ಮೂಲಭೂತ ಸೌಕರ್ಯಗಳನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಿಕೊಳ್ಳಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ ಇವರಿಗೆ ಅಧಿಕಾರ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಆರ್. ಕಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 49

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರು ಲೋಕಾಯುಕ್ತ ಟ್ರ್ಯಾಪ್ ಬಲೆಯಲ್ಲಿ ಸಿಕ್ಕಿಬಿದ್ದಿರುವ ಮತ್ತು ನ್ಯಾಯಾಂಗ ಬಂಧನದಲ್ಲಿದ್ದ ಕಾರಣ ಇವರನ್ನು ಸೇವೆಯಿಂದ ಅಮಾನತ್ತು ಪಡಿಸುವ ಬಗ್ಗೆ.

**ಓದಲಾಗಿದೆ:**
(1) ಹೆಚ್ಚುವರಿ ಪೋಲೀಸು ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ಐಎನ್ ವಿ (ಜಿ) /ಸಿಟಿ / ಕ್ರೈಂ 40/2010, ದಿನಾಂಕ: 25–09–10
(2) ದಿನಾಂಕ: 28–09–10ರ ಆದೇಶ ಸಂಖ್ಯೆ: ಸಿಆಸುಇ 042 ಕೆಇವಿ 10
(3) ಆರಕ್ಷಕ ಅಧೀಕ್ಷಕರು, ನಗರ ವಿಭಾಗ, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ಐಎನ್‌ವಿ (ಜಿ) ಸಿಟಿ / ಕ್ರೈಂ 40/2010, ದಿನಾಂಕ: 19–10–10
(4) ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 6470/2010 ರಲ್ಲಿ ದಿನಾಂಕ: 06–12–10 ರಂದು ನೀಡಿದ ಆದೇಶ

**ಪ್ರಸ್ತಾವನೆ:**

ಶ್ರೀ ಎನ್. ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ವಿಭಾಗ ಪೋಲೀಸು ಠಾಣಾ ಇಲ್ಲಿ ಲಂಚ ನಿರೋಧ ಕಾಯ್ದೆ, 1988 ರ ಕಲಂ 7. 13(1) (d) ಸಹವಾಚನ ಕಲಂ 13(2) ರಡಿ ಮೊಕದ್ದಮೆ ಸಂಖ್ಯೆ: 40/2010ರಲ್ಲಿ ಪ್ರಕರಣ ದಾಖಲಿಸಿಕೊಂಡಿದ್ದು, ಇವರನ್ನು ದಿನಾಂಕ: 16–09–2010 ರಂದು ರಾತ್ರಿ 08–00 ಗಂಟೆಗೆ ಲಂಚ ಸ್ವೀಕಾರ ಆರೋಪದ ಮೇಲೆ ಲೋಕಾಯುಕ್ತ ಪೋಲೀಸರು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿದ್ದು, ಇವರು ದಿನಾಂಕ: 20–09–2010ರ ಸಂಜೆಯವರೆಗೆ ನ್ಯಾಯಾಂಗ ಬಂಧನದಲ್ಲಿರುತ್ತಾರೆಂದು, ಇವರ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇವರು ಈಗ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಾನದಲ್ಲಿಯೇ ಮುಂದುವರಿದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಅಮಾನತ್ತಿನಲ್ಲಿಡಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪ್ರಸ್ತಾವನೆಯಲ್ಲಿ ಹೆಚ್ಚುವರಿ ಪೋಲೀಸು ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಶಿಫಾರಸು ಮಾಡಿರುತ್ತಾರೆ ಹಾಗೂ ತಮ್ಮ ಪ್ರಸ್ತಾವನೆಯೊಂದಿಗೆ ಫಿರ್ಯಾದುದಾರರ ದೂರು ಪ್ರಥಮ ವರ್ತಮಾನ ವರದಿ ಹಾಗೂ ಪಂಚನಾಮೆಯ ಪ್ರತಿಗಳನ್ನು ಲಗತ್ತಿಸಿರುತ್ತಾರೆ.

**ಪ್ರಕರಣದ ವಿವರಗಳು**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ನಾಗದೇವನಹಳ್ಳಿ ಗ್ರಾಮದ ಸರ್ವೆ ನಂ 52/8 ರಲ್ಲಿ 29 ಗುಂಟೆ ಮತ್ತು ಸರ್ವೆ ನಂ 10/3 ರಲ್ಲಿ 01–17 ಎಕರೆ ಜಮೀನನ್ನು ಕಲ್ಯಾಣಿ ಹೌಸಿಂಗ್ ಕೋ–ಆಪರೇಟೀವ್ ಸೊಸೈಟಿಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಬೆಂಗಳೂರು ರವರು ಆದೇಶ ಸಂಖ್ಯೆ: ಎಲ್‌ಎಸಿ 848/86–87 ರಂತೆ ಭೂ ಮಾಲೀಕರಾದ ಶ್ರೀ ಚಿಕ್ಕಣ್ಣ ರವರಿಗೆ 1986 ರಲ್ಲಿ ನೋಟೀಸು ಜಾರಿಗೊಳಿಸಿದ್ದು ಅವಿದ್ಯಾವಂತರಾದ ಶ್ರೀ ಚಿಕ್ಕಣ್ಣ ರವರು ಈ ನೋಟೀಸಿಗೆ ಪ್ರತ್ಯುತ್ತರ / ಆಕ್ಷೇಪಣೆ ನೀಡಿರುವುದಿಲ್ಲ ಮತ್ತು ಭೂ ಸ್ವಾಧೀನವಾದ ಈ ಜಮೀನಿಗೆ ಯಾವುದೇ ಪರಿಹಾರ ಹಣವನ್ನು ಪಡೆದುಕೊಂಡಿರುವುದಿಲ್ಲವೆಂದು ತಿಳಿಸುತ್ತಾ, ಈ ಬಗ್ಗೆ ಮಾನ್ಯ ಮುಖ್ಯ ಮಂತ್ರಿಯವರ ಜನತಾ ದರ್ಶನದಲ್ಲಿ ಸಲ್ಲಿಸಲಾದ ಅರ್ಜಿಯ ಬಗ್ಗೆ ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರಿಗೆ ಪತ್ರ ಬರೆಯಲಾಗಿರುತ್ತದೆ. ಅದರಂತೆ ಸಂಬಂಧಿಸಿದ ದಾಖಲಾತಿಗಳ ಪ್ರತಿಗಳನ್ನು ಒದಗಿಸುವಂತೆ ಕೋರಿ ಭೂ ಮಾಲೀಕರು ದಿನಾಂಕ: 16–08–10 ರಂದು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿಗೆ ಅರ್ಜಿ ಸಲ್ಲಿಸಿ, 2–3 ದಿನಗಳಿಗೊಮ್ಮೆ ಕಛೇರಿಗೆ ಭೇಟಿ ನೀಡುತ್ತಾ ಶ್ರೀ ಎನ್. ಎಂ. ನೀಲಕಂಠ, ವಿಶೇಷ ಭೂ ಸ್ವಾಧೀನಾಧಿಕಾರಿ, ಶ್ರೀ ತಿಪ್ಪಯ್ಯ, ಕಂದಾಯ ನಿರೀಕ್ಷಕ ಶ್ರೀ ಶಾಂತರಾಜು ವಿಷಯ ನಿರ್ವಾಹಕ ಇವರುಗಳನ್ನು ಭೇಟಿ ಮಾಡಿ ತಮ್ಮ ಕೆಲಸವನ್ನು ಮಾಡಿಕೊಡುವಂತೆ ಮನವಿ ಮಾಡಿರುತ್ತಾರೆ.

ದಿನಾಂಕ: 15–09–10 ರಂದು ಮಧ್ಯಾಹ್ನ 03–00 ಗಂಟೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಯಾದ ಶ್ರೀ ಎನ್.ಎಂ. ನೀಲಕಂಠ ರವರನ್ನು ಭೂ ಮಾಲೀಕರು / ಫಿರ್ಯಾದುದಾರರು ಭೇಟಿ ಮಾಡಿ ವಿಚಾರಿಸಿದಾಗ, ಸದರಿ ಜಮೀನನ್ನು ಸರ್ಕಾರದಿಂದ ವಾಪಸ್ಸು ನೀಡಲು ಅಗತ್ಯವಾದ ದಾಖಲಾತಿಗಳನ್ನು ತಯಾರಿಸಿ, ಭೂ ಮಾಲೀಕರಿಗೆ ಅನುಕೂಲವಾಗುವ ರೀತಿಯಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಲು ರೂ. 50000–00ಗಳ ಲಂಚದ

ಹಣವನ್ನು ನೀಡಬೇಕೆಂದು ಫಿರ್ಯಾದುದಾರರಿಗೆ ಒತ್ತಾಯ ಮಾಡಿದ್ದು ಇಷ್ಟು ಮೊತ್ತವನ್ನು ನೀಡಲು ಸಾಧ್ಯವಿಲ್ಲವೆಂದೂ, ರೂ. 2000-00ಗಳನ್ನು ನೀಡುವುದಾಗಿ ಫಿರ್ಯಾದುದಾರರು ತಿಳಿಸಿದ್ದು, ನಂತರ ಶ್ರೀ ನೀಲಕಂಠರವರು ರೂ.10000-00ಗಳನ್ನು ನೀಡುವಂತೆ ಫಿರ್ಯಾದುದಾರರಿಗೆ ತಿಳಿಸುತ್ತಾ, ಈ ಬಗ್ಗೆ ಶ್ರೀ ತಿಪ್ಪಯ್ಯ, ಕಂದಾಯ ನಿರೀಕ್ಷಕರನ್ನು ಸಂಪರ್ಕಿಸುವಂತೆ ತಿಳಿಸಿರುತ್ತಾರೆ. ವಿಶೇಷ ಭೂ ಸ್ವಾಧೀನಾಧಿಕಾರಿಗಳು ತಿಳಿಸಿರುವಂತೆ ರೂ, 10000-00 ಗಳನ್ನು ನೀಡುವಂತೆ ಶ್ರೀ ತಿಪ್ಪಯ್ಯ ರವರು ಹೇಳಿದಾಗ, ಸದ್ಯಕ್ಕೆ ಅಷ್ಟು ಹಣ ನನ್ನ ಬಳಿ ಇಲ್ಲವೆಂದು, ನಾಳೆ ತೆಗೆದುಕೊಂಡು ಬರುವುದಾಗಿ ತಿಳಿಸಿ ಫಿರ್ಯಾದುದಾರರು ವಾಪಸ್ಸು ಬಂದಿರುತ್ತಾರೆ. ಈ ಲಂಚದ ಹಣವನ್ನು ನೀಡಲು ಇಷ್ಟವಿಲ್ಲದಿದ್ದ ಫಿರ್ಯಾದುದಾರರು, ಫಿರ್ಯಾದುದಾರ, ಶ್ರೀ ನೀಲಕಂಠ ಮತ್ತು ಶ್ರೀ ತಿಪ್ಪಯ್ಯ ರವರುಗಳ ನಡುವೆ ನಡೆದ ಈ ಎಲ್ಲ ಸಂಭಾಷಣೆಗಳನ್ನು ಮೊಬೈಲ್ ದೂರವಾಣಿಯಲ್ಲಿ ದಾಖಲಿಸಿಕೊಂಡು (Record) ನಂತರ ಇದನ್ನು CD ಗೆ ಅಳವಡಿಸಿಕೊಂಡು ಶ್ರೀ ನೀಲಕಂಠ ಮತ್ತು ಶ್ರೀ ತಿಪ್ಪಯ್ಯ (ಆರೋಪಿತರು) ರವರುಗಳ ವಿರುದ್ಧ ಕಾನೂನು ಕ್ರಮ ಜರುಗಿಸುವಂತೆ ಭೂ ಮಾಲೀಕರ ಮಗನಾದ ಶ್ರೀ ಸಿ ತಮ್ಮಯ್ಯ, ಬೆಂಗಳೂರು (ಫಿರ್ಯಾದುದಾರರು) ರವರು ದಿನಾಂಕ: 16-09-10 ರಂದು ಬೆಂಗಳೂರು ನಗರ ಲೋಕಾಯುಕ್ತ ಪೋಲೀಸು ಠಾಣೆಗೆ ಹಾಜರಾಗಿ ಲಿಖಿತ ದೂರನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ದೂರಿನ ಹಿನ್ನೆಲೆಯಲ್ಲಿ, ಆರೋಪಿತರಾದ ಶ್ರೀ ಎನ್.ಎಂ.ನೀಲಕಂಠ, ವಿಶೇಷ ಭೂ ಸ್ವಾಧೀನಾಧಿಕಾರಿ ಮತ್ತು ಶ್ರೀ ಟಿ. ತಿಪ್ಪಯ್ಯ, ಕಂದಾಯ ನಿರೀಕ್ಷಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13 (1)(d) ಸಹವಾಚನ ಕಲಂ 13(2) ರಡಿ ಮೊಕದ್ದಮೆ ಸಂಖ್ಯೆ: 40/2010ರಲ್ಲಿ ಪ್ರಕರಣ ದಾಖಲಿಸಿಕೊಂಡು ತನಿಖಾಧಿಕಾರಿಗಳು ತನಿಖೆಯನ್ನು ಕೈಗೊಂಡಿರುತ್ತಾರೆ. ಆ ನಂತರ ಪೂರ್ವಭಾವಿ ಕ್ರಮಗಳನ್ನು ಕೈಗೊಂಡ ತನಿಖಾಧಿಕಾರಿಗಳು ತಮ್ಮ ಸಿಬ್ಬಂದಿ ಮತ್ತು ಪಂಚ ಸಾಕ್ಷಿಗಳ ಸಮೇತ ದಿನಾಂಕ: 16-09-10 ರಂದು ಬೀಸಿದ ಲಂಚ ಸ್ವೀಕಾರ ಟ್ರ್ಯಾಪ್ ಬಲೆಯು ಯಶಸ್ವಿಯಾಗಿದ್ದು, ಆರೋಪಿ-2 ಶ್ರೀ ತಿಪ್ಪಯ್ಯ, ಕಂದಾಯ ನಿರೀಕ್ಷಕ ಇವರು ಫಿರ್ಯಾದುದಾರರಾದ ಶ್ರೀ ತಮ್ಮಯ್ಯ ರವರ ಜೊತೆ ಆಟೋರಿಕ್ಷಾದಲ್ಲಿ ಅಂಬೇಡ್ಕರ್ ರಸ್ತೆಯಲ್ಲಿ ಬಹುಮಹಡಿ ಕಟ್ಟಡದ ಕಡೆಗೆ ಹೋಗುವಾಗ ಆರೋಪಿ-1 ಶ್ರೀ ನೀಲಕಂಠ, ವಿಶೇಷ ಭೂ ಸ್ವಾಧೀನಾಧಿಕಾರಿ ಇವರ ಪರವಾಗಿ ಫಿರ್ಯಾದುದಾರರಿಂದ ರೂ. 10000-00ಗಳ ಲಂಚದ ಹಣವನ್ನು ಆಟೋರಿಕ್ಷಾದಲ್ಲಿ ಸ್ವೀಕರಿಸುವಾಗ ಲೋಕಾಯುಕ್ತ ಪೋಲಿಸರಿಗೆ ಸಿಕ್ಕಿಬಿದ್ದಿರುತ್ತಾರೆ. ಶ್ರೀ ತಿಪ್ಪಯ್ಯ ರವರಿಗೆ ತನಿಖಾಧಿಕಾರಿಗಳು ತಮ್ಮ ಪರಿಚಯವನ್ನು ತಿಳಿಸುತ್ತಾ, ಶ್ರೀ ತಿಪ್ಪಯ್ಯ ರವರ ಮೊಬೈಲ್ ದೂರವಾಣಿಯಿಂದ ಲೌಡ್ ಸ್ಪೀಕರ್ ಆನ್ ಮಾಡಿಸಿ ಆರೋಪಿ-1 ಶ್ರೀ ನೀಲಕಂಠ ರವರಿಗೆ ಕರೆ ಮಾಡಿಸಿ, ನಿನ್ನೆ ತಮ್ಮನ್ನು ಭೇಟಿ ಮಾಡಿದ್ದ ಶ್ರೀ ತಮ್ಮಯ್ಯ ರವರು ರೂ. 10000-00ಗಳನ್ನು ಕೊಟ್ಟಿರುತ್ತಾರೆಂದು ಶ್ರೀ ತಿಪ್ಪಯ್ಯ ರವರಿಂದ ಹೇಳಿಸಿರುತ್ತಾರೆ. ಇದಕ್ಕೆ ಉತ್ತರವಾಗಿ ಶ್ರೀ ನೀಲಕಂಠ ರವರು ಹಣವನ್ನು ನಿಮ್ಮ (ಶ್ರೀ ತಿಪ್ಪಯ್ಯ) ಬಳಿಯೇ ಇಟ್ಟುಕೊಳ್ಳುವಂತೆ ತಿಳಿಸುತ್ತಾ, 15 ನಿಮಿಷ ಅಥವಾ ಅರ್ಧ ಗಂಟೆಯಲ್ಲಿ ಕಛೇರಿಗೆ ಬಂದು ಈ ಹಣವನ್ನು ಪಡೆದುಕೊಳ್ಳುವುದಾಗಿ ತಿಳಿಸಿರುತ್ತಾರೆ. ಈ ಸಂಭಾಷಣೆಯನ್ನು ತನಿಖಾಧಿಕಾರಿಗಳು digital voice recorderನಲ್ಲಿ ದಾಖಲು ಮಾಡಿಕೊಂಡು ಶ್ರೀ ತಿಪ್ಪಯ್ಯ ರವರ ಎರಡೂ ಕೈ ಬೆರಳುಗಳನ್ನು ಪ್ರತ್ಯೇಕವಾಗಿ ಸೋಡಿಯಂ ಕಾರ್ಬೋನೇಟ್ ಮಿಶ್ರಣದ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ, ಬಣ್ಣ ರಹಿತವಾಗಿದ್ದ ದ್ರಾವಣವು ತಿಳಿಗುಲಾಬಿ ಬಣ್ಣಕ್ಕೆ ರೂಪಾಂತರ ಹೊಂದುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ. ಶ್ರೀ ತಿಪ್ಪಯ್ಯ ರವರು ತಾವು ಧರಿಸಿದ್ದ ಪ್ಯಾಂಟಿನ ಮುಂಭಾಗದ ಬಲಭಾಗದ ಒಳಭಾಗದ ಸೊಂಟದ ಜೇಬಿನಲ್ಲಿಟ್ಟುಕೊಂಡಿದ್ದ ಲಂಚದ ಹಣವನ್ನು ಯಥಾರೀತಿ ಪಂಚರ ಸಮಕ್ಷಮ ತನಿಖಾಧಿಕಾರಿಗಳು ವಶಪಡಿಸಿಕೊಂಡಿರುತ್ತಾರೆ.

ಆರೋಪಿ-1 ಶ್ರೀ ಎನ್.ಎಂ. ನೀಲಕಂಠ ರವರನ್ನು ದಿನಾಂಕ:16-09-10 ರಂದು ರಾತ್ರಿ 08-00 ಗಂಟೆ ಸಮಯದಲ್ಲಿ ದಸ್ತಗಿರಿ ಮಾಡಲಾಗಿದ್ದು, ಆರೋಪಿ-2 ಶ್ರೀ ಟಿ. ತಿಪ್ಪಯ್ಯ ರವರನ್ನು ದಿನಾಂಕ:16-09-10ರಂದು ಸಂಜೆ 04-00 ಗಂಟೆ ಸಮಯದಲ್ಲಿ ದಸ್ತಗಿರಿ ಮಾಡಿ ಇವರುಗಳನ್ನು ಸಂಬಂಧಿಸಿದ ಮಾನ್ಯ ನ್ಯಾಯಾಧೀಶರ ಸಮಕ್ಷಮ ಹಾಜರುಪಡಿಸಿ, ಮಾನ್ಯ ನ್ಯಾಯಾಧೀಶರ ಆದೇಶದಂತೆ ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿರುತ್ತದೆ. ಆರೋಪಿ-1 ಶ್ರೀ ನೀಲಕಂಠ ರವರು ದಿನಾಂಕ: 20-09-10 ರವರೆಗೆ ನ್ಯಾಯಾಂಗ ಬಂಧನದಲ್ಲಿರುತ್ತಾರೆ.

**ದಾಖಲೆಗಳೊಂದಿಗೆ ಪ್ರಕರಣದ ವಿವರಗಳ ಪರಿಶೀಲನೆ**

ಶ್ರೀ ಸಿ. ತಮ್ಮಯ್ಯ ಬಿನ್ ಲೇಟ್ ಚಿಕ್ಕಣ್ಣ, ನಂ 54/2ಬಿ, 7ನೇ ಅಡ್ಡರಸ್ತೆ, ನಾಗದೇವನಹಳ್ಳಿ, ಜ್ಞಾನಭಾರತಿ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ ನಾಗದೇವನಹಳ್ಳಿ ಗ್ರಾಮದ ಸರ್ವೆ ನಂ 52/8 ರಲ್ಲಿ 29 ಗುಂಟೆ ಮತ್ತು ಸರ್ವೆ ನಂ 10/3 ರಲ್ಲಿ 01-17 ಎಕರೆ ಜಮೀನಿನ ಮಾಲೀಕರಾದ ಲೇಟ್ ಚಿಕ್ಕಣ್ಣ ರವರ ಮಗನಾಗಿದ್ದು, ಇವರು ದಿನಾಂಕ: 16-09-10 ರಂದು ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ನಗರ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಿದ ಲಿಖಿತ ದೂರನ್ನು ಅವಗಾಹಿಸಲಾಗಿ, ಸದರಿ ಜಮೀನುಗಳು ಕಲ್ಯಾಣಿ ಹೌಸಿಂಗ್ ಕೋ-ಆಪರೇಟೀವ್ ಸೊಸೈಟಿಗಾಗಿ ಸ್ವಾಧೀನವಾಗಿದ್ದು, ಈ ಸಂಬಂಧವಾಗಿ ಭೂ ಮಾಲೀಕರಾದ ಇವರ ತಂದೆಯವರು ಅವಿದ್ಯಾವಂತರಾದ ಕಾರಣ, ಭೂ ಸ್ವಾಧೀನ ಸಂಬಂಧ ನೀಡಲಾಗಿದ್ದ ನೋಟೀಸಿಗೆ ಯಾವುದೇ ಪ್ರತ್ಯುತ್ತರ /ಆಕ್ಷೇಪಣೆಯನ್ನು ಸಲ್ಲಿಸದಿರುವುದು ಹಾಗೂ ಯಾವುದೇ ಪರಿಹಾರದ ಹಣವನ್ನು ಪಡೆದಿಲ್ಲದಿರುವುದು, ಈ ಜಮೀನುಗಳನ್ನು ತಮಗೆ ವಾಪಸ್ಸು ಕೊಡಿಸುವಂತೆ ಕೋರಿ ಶ್ರೀ ತಮ್ಮಯ್ಯ ರವರು ದಿನಾಂಕ: 27-04-10ರಂದು ಮಾನ್ಯ ಮುಖ್ಯ ಮಂತ್ರಿಯವರಿಗೆ ಜನತಾ ದರ್ಶನದಲ್ಲಿ ಅರ್ಜಿ ಸಲ್ಲಿಸಿದ್ದು, ಈ ಬಗ್ಗೆ ಕ್ರಮ ಕೈಗೊಳ್ಳುವಂತೆ ಅರ್ಜಿಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳಿಗೆ ಕಳುಹಿಸಿರುವುದಾಗಿ ದಿನಾಂಕ: 24-06-10ರಂದು ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಿಂದ ಅರ್ಜಿದಾರರಿಗೆ ಮಾಹಿತಿ ಪತ್ರ ಕಳುಹಿಸಲಾಗಿರುವುದು. ಅರ್ಜಿದಾರರು ಸಂಬಂಧಿಸಿದ ದಾಖಲಾತಿ ಪತ್ರಗಳನ್ನು ಒದಗಿಸುವಂತೆ ಕೋರಿ ದಿನಾಂಕ: 16-08-10 ರಂದು ವಿಶೇಷ ಭೂ ಸ್ವಾಧೀನಾಧಿಕಾರಿಗಳಿಗೆ ಅರ್ಜಿ ಸಲ್ಲಿಸಿರುವುದು. ಈ ಬಗ್ಗೆ ನಿರಂತರವಾಗಿ ಸದರಿ ಕಛೇರಿಯಲ್ಲಿನ ಅಧಿಕಾರಿ ಹಾಗೂ ಸಿಬ್ಬಂದಿಯನ್ನು ಭೇಟಿ ಮಾಡುತ್ತಾ ಅರ್ಜಿಯ ಬಗ್ಗೆ ಆಗುತ್ತಿರುವ ಪ್ರಗತಿಯ ಬಗ್ಗೆ ವಿಚಾರಿಸಿರುವುದು, ಮಾಹಿತಿ ಪಡೆಯುವ ಸಲುವಾಗಿ ಅರ್ಜಿದಾರರು ಕಂದಾಯ ನಿರೀಕ್ಷಕ ಶ್ರೀ ತಿಪ್ಪಯ್ಯ ರವರನ್ನು ಮೊಬೈಲ್ ದೂರವಾಣಿ ಮೂಲಕ ಸಂಪರ್ಕಿಸಿರುವುದು, ದಿನಾಂಕ: 15—09-10ರಂದು ಶ್ರೀ ನೀಲಕಂಠ ರವರನ್ನು ಭೇಟಿ ಮಾಡಿದಾಗ, ಸರ್ಕಾರಕ್ಕೆ ಇವರ ಪರವಾಗಿ ಅನುಕೂಲಕರ ವರದಿ ಸಲ್ಲಿಸಲು ರೂ. 50000-00 ಗಳನ್ನು ನೀಡುವಂತೆ ಶ್ರೀ ನೀಲಕಂಠ ರವರು ಶ್ರೀ ತಮ್ಮಯ್ಯ ರವರನ್ನು ಒತ್ತಾಯಿಸಿರುವುದು, ಅಂತಿಮವಾಗಿ ರೂ. 10000-00 ಗಳನ್ನು ನೀಡುವಂತೆ ಶ್ರೀ ತಮ್ಮಯ್ಯ ರವರಿಗೆ ಸೂಚಿಸಿರುವುದು ಇತ್ಯಾದಿಗಳು ದೂರು ಅರ್ಜಿಯಲ್ಲಿ ಉಲ್ಲೇಖವಿದ್ದು, ಇವರುಗಳ ನಡುವೆ ನಡೆದ ಸಂಭಾಷಣೆಯನ್ನು ಶ್ರೀ ತಮ್ಮಯ್ಯ ರವರು ತಮ್ಮ ಮೊಬೈಲ್ ದೂರವಾಣಿಯಲ್ಲಿ ದಾಖಲಿಸಿಕೊಂಡು ನಂತರ ಇದನ್ನು ಸಿ ಡಿ ಗೆ ವರ್ಗಾವಣೆ ಮಾಡಿರುವುದು, ಲಂಚದ ಹಣವನ್ನು ನೀಡಲು ಇಷ್ಟವಿಲ್ಲದ ಶ್ರೀ ತಮ್ಮಯ್ಯ ರವರು

ಶ್ರೀ ನೀಲಕಂಠ ಮತ್ತು ಶ್ರೀ ತಿಪ್ಪಯ್ಯರವರುಗಳ ವಿರುದ್ಧ ಲೋಕಾಯುಕ್ತ ಪೋಲೀಸರಿಗೆ ದೂರು ನೀಡುವಾಗ ಸಂಭಾಷಣೆಯನ್ನು ದಾಖಲು ಮಾಡಲಾಗಿದ್ದ ಸಿ ಡಿ ಯನ್ನು ಹಾಜರುಪಡಿಸಿರುವುದು ತಿಳಿದುಬರುತ್ತದೆ.

ದಿನಾಂಕ: 16–09–10ರ ಟ್ರ್ಯಾಪ್ ಪೂರ್ವದ ಪ್ರಾಯೋಗಿಕ ಪಂಚನಾಮೆಯ ವರದಿಯನ್ನು ಅವಗಾಹಿಸಲಾಗಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಕಛೇರಿಯ ಇಬ್ಬರು ನೌಕರರನ್ನು ಸಾಕ್ಷಿದಾರರನ್ನಾಗಿ ಗುರುತಿಸಿ ಇವರುಗಳ ಸಮಕ್ಷಮ ತನಿಖಾಧಿಕಾರಿಯು ಫಿರ್ಯಾದುದಾರರನ್ನು ಪರಿಚಯಿಸಿರುವುದು ದೂರು ಅರ್ಜಿಯಲ್ಲಿನ ಸಾರಾಂಶವನ್ನು ತಿಳಿಸಿರುವುದು ದೂರು ಅರ್ಜಿಯಲ್ಲಿನ ಸತ್ಯಾಂಶದ ಬಗ್ಗೆ ಫಿರ್ಯಾದುದಾರರಿಂದ ಖಚಿತಪಡಿಸಿಕೊಂಡಿರುವುದು ಲಂಚದ ಹಣವಾಗಿ ನೀಡುವ ನೋಟುಗಳ ಸಂಖ್ಯೆಯನ್ನು ದಾಖಲು ಮಾಡಿಕೊಂಡಿರುವುದು ಲಂಚದ ಹಣವನ್ನು ಯಾವ ರೀತಿ ನಿರ್ವಹಿಸಬೇಕೆಂದು ಮತ್ತು ಇದನ್ನು ಆರೋಪಿತನಿಗೆ ನೀಡುವಲ್ಲಿ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳನ್ನು ಫಿರ್ಯಾದುದಾರರಿಗೆ ತಿಳುವಳಿಕೆ ನೀಡಿರುವುದು ಸೋಡಿಯಂ ಕಾರ್ಬೋನೇಟ್ ದ್ರಾವಣವನ್ನು ಪ್ರಾಯೋಗಿಕವಾಗಿ ತಯಾರಿಸಿ ಪರೀಕ್ಷಿಸಿರುವುದು ಫಿರ್ಯಾದುದಾರರು ದೂರು ಅರ್ಜಿಯ ಜೊತೆ ಹಾಜರುಪಡಿಸಿದ್ದ ಸಿ ಡಿ ಯಲ್ಲಿನ ಸಂಭಾಷಣೆಯನ್ನು ಸಾಕ್ಷೀದಾರರಿಗೆ ಕೇಳಿಸಿರುವುದು, ಹಾಗೂ ಈ ಎಲ್ಲ ಪ್ರಕ್ರಿಯೆಗಳನ್ನು ತನಿಖಾಧಿಕಾರಿಗಳು ವಿಡಿಯೋ ಚಿತ್ರೀಕರಣ ಮಾಡಿಸಿರುವುದು ತಿಳಿದುಬರುತ್ತದೆ.

ದಿನಾಂಕ: 16–09–10ರ ಟ್ರ್ಯಾಪ್ ಪಂಚನಾಮೆಯನ್ನು ಅವಗಾಹಿಸಲಾಗಿ ಸಾಕ್ಷೀದಾರರು (ಪಂಚರು) ಸೇರಿದಂತೆ ತನಿಖಾಧಿಕಾರಿ ಹಾಗೂ ಅವರ ಸಿಬ್ಬಂದಿ ವರ್ಗ ಒಟ್ಟು 9 ಜನರ ಟ್ರ್ಯಾಪ್ ತಂಡವು ಪ್ರಾಯೋಗಿಕ ಪಂಚನಾಮೆ ಪ್ರಕ್ರಿಯೆ ಮುಗಿದ ಕೂಡಲೇ ತನಿಖಾಧಿಕಾರಿಯವರ ಕಛೇರಿಯಿಂದ ಸರ್ಕಾರಿ ವಾಹನದಲ್ಲಿ ಹೊರಟು ಸುಮಾರು ಮಧ್ಯಾಹ್ನ 01–45ರ ಸಮಯದಲ್ಲಿ ಆರೋಪಿತರ ಕಛೇರಿಯ ಸಮೀಪ ವಾಹನವನ್ನು ನಿಲ್ಲಿಸಿ ಲಂಚದ ಹಣ ನೀಡುವ ಸಂದರ್ಭದಲ್ಲಿ ಕೈಗೊಳ್ಳಬೇಕಾದ ಮುಂಜಾಗ್ರತ ಕ್ರಮಗಳನ್ನು ಸಲಹೆ ಸೂಚನೆಗಳನ್ನು ಅಗತ್ಯ ಉಪಕರಣಗಳ ಸಹಿತ ಮತ್ತೊಮ್ಮೆ ಫಿರ್ಯಾದುದಾರರಿಗೆ ತನಿಖಾಧಿಕಾರಿಗಳು ನೀಡಿರುವುದು ಫಿರ್ಯಾದುದಾರ ಮತ್ತು ಶ್ರೀ ತಿಪ್ಪಯ್ಯ ರವರುಗಳು ಆಟೋರಿಕ್ಷಾದ ಮೂಲಕ ಕೆ.ಆರ್. ವೃತ್ತದ ಕಡೆ ಹೊರಟು ಲೋಕಾಯುಕ್ತ ಕಛೇರಿ ಕಟ್ಟಡದ ಮುಂಭಾಗದಲ್ಲಿರುವ ಸಣ್ಣ ಟೀ ಅಂಗಡಿ ಬಳಿ ಇಳಿದಿರುವುದು ಮಾರ್ಗ ಮಧ್ಯೆ ಆಟೋರಿಕ್ಷಾದಲ್ಲಿ ಆರೋಪಿತ–2 ಶ್ರೀ ತಿಪ್ಪಯ್ಯ ರವರು ಫಿರ್ಯಾದುದಾರರಿಂದ ಲಂಚದ ಹಣವನ್ನು ಪಡೆದಿರುವುದಾಗಿ ಫಿರ್ಯಾದುದಾರರು ತನಿಖಾಧಿಕಾರಿಗಳಿಗೆ ತಿಳಿಸಿರುವುದು, ಆರೋಪಿತ–2 ರವರ ಮೊಬೈಲ್ ದೂರವಾಣಿ ಮೂಲಕ ಆರೋಪಿತ–1 ರವರಿಗೆ loudspeaker on ಮಾಡಿಸಿ ಆರೋಪಿತ–2 ರವರಿಂದ ಆರೋಪಿತ–1 ರವರಿಗೆ ಕರೆ ಮಾಡಿ ಮಾತನಾಡಿಸಿರುವುದು, ಆರೋಪಿತರ ಹಸ್ತ ಶುದ್ಧೀಕರಣ ಪ್ರಕ್ರಿಯೆ ನಡೆಸಿರುವುದು ಆರೋಪಿತ–2 ರವರಿಂದ ಲಂಚದ ಹಣವನ್ನು ವಶಪಡಿಸಿಕೊಂಡಿರುವುದು ಇತ್ಯಾದಿ ವಿವರಗಳು ಕಂಡುಬರುತ್ತದೆ.

**ದಾಖಲೆಗಳೊಂದಿಗೆ ಪ್ರಸ್ತಾವನೆಯ ಪರಿಶೀಲನೆ**

ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಮೇಲೆ ಓದಲಾದ ಪ್ರಸ್ತಾವನೆಯನ್ನು, ಪ್ರಸ್ತಾವನೆಯೊಂದಿಗೆ ಕಳುಹಿಸಲಾಗಿದ್ದ ಫಿರ್ಯಾದುದಾರರ ದೂರು ಪ್ರಥಮ ವರ್ತಮಾನ ವರದಿ ಹಾಗೂ ಪಂಚನಾಮೆಯ ಪ್ರತಿಗಳೊಂದಿಗೆ ಪರಿಶೀಲಿಸಲಾಗಿ ಕೆಳಕಂಡ ಸಕಾರಣಗಳಿಂದ ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ಎಂ.ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ರವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಡುವುದು ಸಮಂಜಸವೆಂದು ಮನವರಿಕೆಯಾಗಿರುತ್ತದೆ.

1. ಶ್ರೀ ಸಿ. ತಮ್ಮಯ್ಯ ಬಿನ್ ಲೇ ಚಿಕ್ಕಣ್ಣ ರವರು ಲೋಕಾಯುಕ್ತ ಪೋಲೀಸರಿಗೆ ಸಲ್ಲಿಸಿದ ದಿನಾಂಕ: 16–09–10ರ ದೂರು ಅರ್ಜಿಯಲ್ಲಿ ಅವರ ದಿವಂಗತ ತಂದೆಯವರಿಗೆ ಸೇರಿದ ಜಮೀನು ಸ್ವಾಧೀನ ಪ್ರಕ್ರಿಯೆಗೆ ಒಳಪಟ್ಟು ನೀಡಲಾದ ನೋಟೀಸಿಗೆ ಉತ್ತರ / ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಅವರು ಅನಕ್ಷರಸ್ತರಾಗಿದ್ದುದು. ಈ ಬಗ್ಗೆ ಅವರ ಮಗ ಶ್ರೀ ತಮ್ಮಯ್ಯ ರವರು ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಗೆ ಹಲವಾರು ಬಾರಿ ಭೇಟಿ ನೀಡಿರುವ ಅಂಶವನ್ನು ಅವರೇ ತಿಳಿಸಿದ್ದು, ಇವರ ಕೆಲಸ ಆಗದಿದ್ದ ಕಾರಣ, ಇವರು ಅಂತಿಮವಾಗಿ ಮಾನ್ಯ ಮುಖ್ಯ ಮಂತ್ರಿಯವರಿಗೆ ಅರ್ಜಿ ಸಲ್ಲಿಸಿರುವುದರಿಂದ ಇವರು ಹಲವಾರು ಬಾರಿ ಕಛೇರಿಗೆ ಭೇಟಿ ನೀಡಿರುವುದು ದೃಢಪಡುತ್ತದೆ.
2. ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿದ ಅರ್ಜಿಯ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ ಹಾಗೂ ಯಾವ ಅಧಿಕಾರಿಯನ್ನು ಭೇಟಿ ಮಾಡಬೇಕು ಎಂಬ ಬಗ್ಗೆ ಮುಖ್ಯ ಮಂತ್ರಿಗಳ ಸಚಿವಾಲಯದಿಂದ ಶ್ರೀ ತಮ್ಮಯ್ಯರವರಿಗೆ ಪತ್ರ ಮುಖೇನ ಮಾಹಿತಿ ಇದ್ದು, ಈ ಅಂಶವನ್ನು ದೂರು ಅರ್ಜಿಯಲ್ಲಿಯೂ ಸಹ ದಾಖಲಿಸಿರುವುದರಿಂದ ಶ್ರೀ ತಮ್ಮಯ್ಯ ರವರು ತಮ್ಮ ಅಹವಾಲಿನ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರಿಗೆ ಅರ್ಜಿ ಸಲ್ಲಿಸಿರುವುದು ದೃಢಪಡುತ್ತದೆ.
3. ಶ್ರೀ ತಮ್ಮಯ್ಯ ರವರು ತಮ್ಮ ಕೆಲಸದ ಪ್ರಗತಿಯ ಬಗ್ಗೆ ವಿಶೇಷ ಭೂ ಸ್ವಾಧೀನಾಧಿಕಾರಿ ಶ್ರೀ ನೀಲಕಂಠ ರವರನ್ನು ಭೇಟಿ ಮಾಡಿ ಅರ್ಜಿ ಸಲ್ಲಿಸಿರುವುದು ಶ್ರೀ ತಿಪ್ಪಯ್ಯರವರನ್ನೂ ಸಹ ಆಗಿಂದ್ದಾಗ್ಗೆ ಭೇಟಿ ಮಾಡುತ್ತಿದ್ದ ಅಂಶವು ಶ್ರೀ ತಮ್ಮಯ್ಯ ರವರು ತಮ್ಮ ಕೆಲಸದಲ್ಲಿ ಆಗಿರುವ ಮತ್ತು ಆಗುತ್ತಿರುವ ಪ್ರಗತಿಯ ಬಗ್ಗೆ ಮಾಹಿತಿ ತಿಳಿಸುವಂತೆ ತಮ್ಮ ಮೊಬೈಲ್ ದೂರವಾಣಿ ಮೂಲಕ ಶ್ರೀ ತಿಪ್ಪಯ್ಯರವರನ್ನು ಸಂಪರ್ಕಿಸುತ್ತಿದ್ದ ಮೂಲಕ ದೃಢಪಡುತ್ತದೆ.
4. ಶ್ರೀ ತಮ್ಮಯ್ಯ ರವರು ದಿನಾಂಕ: 15–09–10ರಂದು ಶ್ರೀ ನೀಲಕಂಠ ರವರನ್ನು ಭೇಟಿಯಾಗಿದ್ದಾಗ ಇವರ ಪರವಾಗಿ ಕೆಲಸವನ್ನು ಮಾಡಿಕೊಡಲು ಆರೋಪಿತ–1 ಶ್ರೀ ನೀಲಕಂಠ ರವರು ರೂ.50000–00ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ಅಂತಿಮವಾಗಿ ರೂ. 10000–00ಗಳಿಗೆ ವ್ಯವಹಾರ ಕುದುರಿರುವುದು ಇದನ್ನೇ ಶ್ರೀ ತಿಪ್ಪಯ್ಯ ಸಹ ಹೇಳಿರುವ ಎಲ್ಲ ಸಂಭಾಷಣೆಗಳು ಸಿ ಡಿ ರೂಪದಲ್ಲಿ ದಾಖಲಿಸಿರುವುದರಿಂದ, ಸಂಭಾಷಣೆ ನಡೆದಿರುವುದು ದೃಢಪಡುತ್ತದೆ. ಇದರಿಂದಾಗಿ ಆರೋಪಿತರುಗಳು ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ಸ್ಪಷ್ಟವಾಗುತ್ತದೆ.
5. ಟ್ರ್ಯಾಪ್ ಪೂರ್ವದ ಪ್ರಾಯೋಗಿಕ ಪಂಚನಾಮೆಯ ಭಾಗವಾಗಿ ಆರೋಪಿತರಿಗೆ ನೀಡಲಾಗುವ ಲಂಚದ ರೂಪಾಯಿಗಳ ಮುಖ ಬೆಲೆ ಮತ್ತು ನೋಟುಗಳ ಸಂಖ್ಯೆಗಳು ಟ್ರ್ಯಾಪ್ ನಂತರ ಆರೋಪಿ–2 ರವರಿಂದ ವಶಪಡಿಸಿಕೊಳ್ಳಲಾದ ರೂಪಾಯಿಗಳಿಗೆ ಹೋಲಿಕೆಯಾಗುವ ಕಾರಣ ಆರೋಪಿ–2 ಲಂಚದ ಹಣವನ್ನು ಫಿರ್ಯಾದುದಾರರಿಂದ ಪಡೆದಿರುವುದು ದೃಢಪಡುತ್ತದೆ.
6. ಆರೋಪಿ–2 ರವರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ ದ್ರಾವಣವು ತಿಳಿಗುಲಾಬಿ ಬಣ್ಣಕ್ಕೆ ರೂಪಾಂತರಗೊಂಡಿರುವುದರಿಂದ ಆರೋಪಿ–2 ರವರು ಸ್ವ ಹಸ್ತದಿಂದ ಲಂಚದ ಹಣವನ್ನು ಪಡೆದಿರುವುದು ದೃಢಪಡುತ್ತದೆ.

7. ಆರೋಪಿ-2 ರವರು ತಿಳಿಸಿದಂತೆ ಅವರು ತಾವು ಧರಿಸಿದ್ದ ಪ್ಯಾಂಟಿನ ಮುಂಭಾಗದ ಬಲಭಾಗದ ಒಳಭಾಗದ ಸೊಂಟದ ಜೇಬಿನಿಂದ ಹೊರತೆಗೆಯಲಾದ ಹಣದ ಮುಖ ಬೆಲೆ ಮತ್ತು ನೋಟಿನ ಸಂಖ್ಯೆಗಳನ್ನು ಪರಿಶೀಲಿಸಿದಾಗ, ಟ್ರ್ಯಾಪ್ ಪೂರ್ವದ ಪ್ರಾಯೋಗಿಕ ಪಂಚನಾಮೆ ಸಮಯದಲ್ಲಿ ಫಿರ್ಯಾದುದಾರರಿಗೆ ತನಿಖಾಧಿಕಾರಿಗಳು ರಾಸಾಯನಿಕ ಕ್ರಿಯೆಗೆ ಒಳಪಡಿಸಿ ನೀಡಲಾದ ನೋಟಿನ ಮುಖ ಬೆಲೆ ಮತ್ತು ಸಂಖ್ಯೆಗಳಿಗೆ ಹೊಂದಿಕೆಯಾಗುವುದರಿಂದ ಮತ್ತು ಆರೋಪಿತ-2 ರವರು ಧರಿಸಿದ್ದ ಪ್ಯಾಂಟಿನ ಲಂಚದ ಹಣವಿರಿಸಿಕೊಂಡಿದ್ದ ಜೇಬಿನ ಭಾಗವನ್ನು ರಾಸಾಯನಿಕ ಕ್ರಿಯೆಗೆ ಒಳಪಡಿಸಿದಾಗ ರಾಸಾಯನಿಕ ಕ್ರಿಯೆಯು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ. ಇದರಿಂದಾಗಿ ಆರೋಪಿತ-2 ರವರು ಲಂಚದ ಹಣವನ್ನು ಫಿರ್ಯಾದುದಾರರಿಂದ ಪಡೆದು ತಾವು ಧರಿಸಿದ್ದ ಪ್ಯಾಂಟಿನ ಜೇಬಿನಲ್ಲಿರಿಸಿಕೊಂಡಿರುವುದು ಮತ್ತಷ್ಟು ದೃಢಪಡುತ್ತದೆ.

8. ಲಂಚದ ಹಣವನ್ನು ಪಡೆದ ನಂತರ, ಆರೋಪಿತ-2 ರವರು ತಮ್ಮ ಮೊಬೈಲ್ ದೂರವಾಣಿ ಮೂಲಕ ಆರೋಪಿ-1 ರವರನ್ನು ಸಂಪರ್ಕಿಸಿ ಫಿರ್ಯಾದುದಾರರಿಂದ ಲಂಚದ ಹಣವನ್ನು ಪಡೆದಿರುವುದಾಗಿ ತಿಳಿಸಿರುವುದು ಮತ್ತು ಅದಕ್ಕೆ ಉತ್ತರವಾಗಿ ಆರೋಪಿ-1 ರವರು ಅದನ್ನು ತಾವು ಕಛೇರಿಗೆ ಬಂದು ಸ್ವೀಕರಿಸುವುದಾಗಿ ತಿಳಿಸಿರುವುದು. ದೂರವಾಣಿಯನ್ನು loud speaker on ಮಾಡಿಸಿ ಮಾತನಾಡಿಸಿರುವುದರಿಂದ ಹಾಗೂ ಈ ಸಂಭಾಷಣೆಯನ್ನು digital voice recorder ನಲ್ಲಿ ದಾಖಲು ಮಾಡಿಕೊಂಡಿರುವುದರಿಂದ ಲಂಚದ ಹಣಕ್ಕಾಗಿ ಆರೋಪಿ-1 ಶ್ರೀ ನೀಲಕಂಠ ರವರು ಫಿರ್ಯಾದುದಾರರನ್ನು ಒತ್ತಾಯಿಸಿರುವುದು ದೃಢಪಡುತ್ತದೆ.

9. ಆರೋಪಿ-2 ಶ್ರೀ ತಿಪ್ಪಯ್ಯ ರವರನ್ನು ಅವರ ಕಛೇರಿಯ ಮತ್ತೊಬ್ಬ ನೌಕರ ಶ್ರೀ ಶಾಂತರಾಜು ರವರು ದಿನಾಂಕ: 16-09-10 ರಂದು ಸಂಜೆ ಎರಡು ಬಾರಿ (06-00 and 07-30 pm) ಮೊಬೈಲ್ ದೂರವಾಣಿ ಮೂಲಕ ಸಂಪರ್ಕಿಸಿ, ಸಾಹೇಬ್ರು ಕರೀತಿದ್ದಾರೆ ಎಂದು ತಿಳಿಸಿರುವುದನ್ನು ಗಮನಿಸಿದಲ್ಲಿ ಆರೋಪಿ-1 ಶ್ರೀ ನೀಲಕಂಠ ರವರು ಲಂಚದ ಹಣವನ್ನು ಸ್ವೀಕರಿಸಿರುವ ಆರೋಪಿ-2 ಶ್ರೀ ತಿಪ್ಪಯ್ಯ ರವರಿಂದ ಆ ಲಂಚದ ಹಣವನ್ನು ಪಡೆಯುವ ಸಲುವಾಗಿ ತಮ್ಮ ಅಧೀನ ಸಿಬ್ಬಂದಿ ಶ್ರೀ ಶಾಂತರಾಜು ರವರಿಂದ ದೂರವಾಣಿ ಕರೆ ಮಾಡಿಸಿರುವುದು ದೃಢಪಡುತ್ತದೆ. ಇದರಿಂದಾಗಿ ಆರೋಪಿ-1 ರವರು ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ಮತ್ತು ಅದನ್ನು ಪಡೆಯಲು ಉತ್ಸುಕರಾಗಿರುವುದು ವೇದ್ಯವಾಗುತ್ತದೆ.

10. ವಿಶೇಷ ಭೂ ಸ್ವಾಧೀನಾಧಿಕಾರಿಯವರ ಕಛೇರಿಯಲ್ಲಿನ ಫಿರ್ಯಾದುದಾರ ಕಡತವನ್ನು ಪರಿಶೀಲಿಸಲಾಗಿ ಮಾನ್ಯ ಮುಖ್ಯ ಮಂತ್ರಿಯವರಿಗೆ ಸಲ್ಲಿಸಿದ ಅರ್ಜಿಯ ಮೂಲ ಪ್ರತಿ ಸರ್ಕಾರದಿಂದ ಬಂದಿರುವ ಪತ್ರ ಅಂತಿಮ ನೋಟೀಸು ಇತ್ಯಾದಿ ದಾಖಲೆಗಳು ಒಳಗೊಂಡಿದ್ದು, ಇದರಿಂದಾಗಿ ಫಿರ್ಯಾದುದಾರರು ತಮ್ಮ ಕೆಲಸಕ್ಕಾಗಿ ಆರೋಪಿತರನ್ನು ಆಗಿಂದಾಗ್ಗೆ ಸಂಪರ್ಕಿಸುತ್ತಿದ್ದುದು ದೃಢಪಡುತ್ತದೆ.

11. ಆರೋಪಿ-2 ಶ್ರೀ ತಿಪ್ಪಯ್ಯ ರವರು ತಮ್ಮ ವರದಿಯಲ್ಲಿ, ಶ್ರೀ ತಮ್ಮಯ್ಯ ರವರ ಮನವಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ರೂ.10000-00 ಗಳನ್ನು ಕೊಡುತ್ತಾರೆಂದು ಇದನ್ನು ತೆಗೆದುಕೊಂಡು ರೆಕಾರ್ಡನ್ನು ಕಳುಹಿಸಿಕೊಡು ಹಣವನ್ನು ಕೊಡದೇ ರೆಕಾರ್ಡನ್ನು ಕಳುಹಿಸಬಾರದೆಂದು ಆರೋಪಿ-1 ಶ್ರೀ ನೀಲಕಂಠ ರವರು 3-4 ದಿನಗಳ ಹಿಂದೆಯೇ ನೀಡಿದ ಸೂಚನೆಯಂತೆ ಹಣ ಪಡದಿರುತ್ತೇನೆಂದು ತಿಳಿಸಿರುವುದರಿಂದ ತಮ್ಮ ಪರವಾಗಿ ಲಂಚದ ಹಣವನ್ನು ಸ್ವೀಕರಿಸುವಂತೆ ಆರೋಪಿ-1 ರವರು ಆರೋಪಿ-2 ರವರಿಗೆ ತಿಳಿಸಿರುವುದು ವೇದ್ಯವಾಗುತ್ತದೆ. ಇದರಿಂದಲೂ ಸಹ ಆರೋಪಿತರು ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ದೃಢಪಡುತ್ತದೆ.

12. ಆರೋಪಿ-1ರ ಪರವಾಗಿ ರೂ.10000-00ಗಳ ಲಂಚದ ಹಣವನ್ನು ಸ್ವೀಕರಿಸಿದ ಆರೋಪಿ-2 ಶ್ರೀ ತಿಪ್ಪಯ್ಯ ರವರು ನಂತರ ತನ್ನ ಪಾಲಿನ ಲಂಚದ ಹಣಕ್ಕಾಗಿ ಫಿರ್ಯಾದುದಾರರಿಗೆ ಒತ್ತಾಯಿಸಿ ನನ್ನದನ್ನು ಪೆಂಡಿಂಗ್ ಉಳಿಸಿಕೊಂಡ್ಬಿಟ್ಟೆ ಎಂದು ಹೇಳಿರುವುದನ್ನು ಗಮನಿಸಿದಲ್ಲಿ, ಆರೋಪಿ-1 ಶ್ರೀ ನೀಲಕಂಠ ರವರು ತಮ್ಮ ಲಂಚದ ಹಣವನ್ನು ಆರೋಪಿ-2 ರವರು ಫಿರ್ಯಾದುದಾರರಿಂದ ಪಡೆದುಕೊಂಡು ತಮ್ಮ ಬಳಿಯೇ ಇಟ್ಟುಕೊಳ್ಳುವಂತೆಯೂ ನಂತರ ಅದನ್ನು ತಾನು ಪಡೆಯುವುದಾಗಿಯೂ ತಿಳಿಸಿರುವುದು ಸತ್ಯವೆನಿಸುತ್ತದೆ. ಇದರಿಂದಾಗಿಯೂ ಸಹ ಆರೋಪಿತರು ಲಂಚದ ಹಣಕ್ಕೆ ಫಿರ್ಯಾದುದಾರರನ್ನು ಒತ್ತಾಯಿಸಿ ಪಡೆದಿರುವುದು ದೃಢಪಡುತ್ತದೆ.

13. ಆರೋಪಿ-1 ಶ್ರೀ ನೀಲಕಂಠ ರವರು ನ್ಯಾಯಾಂಗ ಬಂಧನದಲ್ಲಿ ಕಳೆದ ಅವಧಿಯು 48 ಗಂಟೆಗಳಿಗೂ ಮೀರಿರುವುದರಿಂದ

14. ಆರೋಪಿ-1 ಶ್ರೀ ನೀಲಕಂಠ ರವರನ್ನು ಅವರು ಈಗ ನಿರ್ವಹಿಸುತ್ತಿರುವ ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಿದಲ್ಲಿ, ಸಾಕ್ಷ್ಯಾಧಾರಗಳನ್ನು ನಾಶಪಡಿಸುವ / ತಿರುಚುವ ಸಾಧ್ಯತೆಗಳನ್ನು ತಪ್ಪಿಸುವ ದೃಷ್ಟಿಯಿಂದ

15. ಪ್ರಕರಣದ ಸುಗಮ ತನಿಖೆಯ ಸಲುವಾಗಿ

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ ಬೆಂಗಳೂರು ಇವರನ್ನು ದಿನಾಂಕ: 16-09-10 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಶ್ರೀ ಎನ್. ಎಂ. ನೀಲಕಂಠ ಕೆಎಎಸ್ (ಕಿರಿಯ ಶ್ರೇಣಿ) ವಿಶೇಷ ಭೂ ಸ್ವಾಧೀನಾಧಿಕಾರಿ ಬೆಂಗಳೂರು ಇವರು ದಿನಾಂಕ: 16-09-10 ರಿಂದ20-09-10ರವರೆಗೆ ನ್ಯಾಯಾಂಗ ಬಂಧನದಲ್ಲಿರುವುದಾಗಿ ವರದಿ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು, ದಿನಾಂಕ: 28-09-10ರ ಆದೇಶ ಸಂಖ್ಯೆ: ಸಿಆಸುಇ 042 ಕೆಇವಿ 10ನ್ನು ರದ್ದುಗೊಳಿಸುತ್ತಾ ಸರ್ಕಾರವು, ಪ್ರಕರಣವನ್ನು ಪರಿಶೀಲಿಸಿ, ಅಗತ್ಯವೆನಿಸಿದಲ್ಲಿ ಹೊಸ ಆದೇಶವನ್ನು ಹೊರಡಿಸಲು ಮುಕ್ತ ಅವಕಾಶವನ್ನು ಕಲ್ಪಿಸಿದೆ.

ಹೆಚ್ಚುವರಿ ಪೋಲೀಸು ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಮೇಲೆ ಓದಲಾದ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಸಾಕ್ಷ್ಯಾಧಾರಗಳೊಂದಿಗೆ ಪರಿಶೀಲಿಸಿರುವುದರಿಂದಲೂ, ಶ್ರೀ ಎನ್. ಎಂ. ನೀಲಕಂಠ ರವರು 48 ಗಂಟೆಗಳಿಗೂ ಮೀರಿ ಹೆಚ್ಚಿನ ಅವಧಿಗೆ ನ್ಯಾಯಾಂಗ ಬಂಧನದಲ್ಲಿ ಇದ್ದುದರಿಂದಲೂ, ಇವರು ಲಂಚದ ಹಣಕ್ಕಾಗಿ ಫಿರ್ಯಾದುದಾರರನ್ನು ಒತ್ತಾಯಿಸಿರುವುದು ಮತ್ತು ಅದನ್ನು ಪಡೆಯುವಲ್ಲಿನ ಕೃತ್ಯವು ಮೇಲಿನ ವಿವರಗಳಿಂದ ನಿಸ್ಸಂಶಯವಾಗಿ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ಮನವರಿಕೆಯಾಗಿರುವುದರಿಂದಲೂ, ಆಪಾದಿತರು ಸಾಕ್ಷ್ಯಾಧಾರಗಳನ್ನು ತಿರುಚುವ/ ನಾಶಪಡಿಸುವ ಸಂಭವವನ್ನು ತಪ್ಪಿಸುವ ಮತ್ತು ಪ್ರಕರಣದ ಸುಗಮ ತನಿಖೆಯ ಹಿತದೃಷ್ಟಿಯಿಂದ ಇವರನ್ನು ಇವರು ಈಗ

ನಿರ್ವಹಿಸುತ್ತಿರುವ ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸುವುದು ಸರ್ವ ರೀತಿಯಲ್ಲಿಯೂ ಸಮಂಜಸವಲ್ಲವೆಂದು ನಿರ್ಣಯಿಸಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶವನ್ನು ಗಮನದಲ್ಲಿರಿಸಿಕೊಂಡು, ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 042 ಕೆಇವಿ 2010, ಬೆಂಗಳೂರು, ದಿನಾಂಕ: 22-12-2010**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಎನ್. ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರು ದಿನಾಂಕ: 16-09-10 ರಂದು ಲಂಚ ಸ್ವೀಕಾರ ಆರೋಪದ ಮೇಲೆ ಕರ್ನಾಟಕ ಲೋಕಾಯುಕ್ತ ಪೋಲೀಸರಿಂದ ದಸ್ತಗಿರಿಯಾಗಿ, ದಿನಾಂಕ: 16-09-10 ರಿಂದ 20-09-10 ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದ ಅವಧಿಯು 48 ಗಂಟೆಗಳಿಗೂ ಮೀರಿರುವುದರಿಂದ ಹಾಗೂ ಇವರು ಸದರಿ ಹುದ್ದೆಯಲ್ಲಿಯೇ ಮುಂದುವರಿದಲ್ಲಿ, ಸಾಕ್ಷ್ಯಾಧಾರಗಳನ್ನು ನಾಶಪಡಿಸುವ / ತಿರುಚುವ ಸಾಧ್ಯತೆ ಇರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(2)(a) ಮತ್ತು ನಿಯಮ10(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಇವರು ನ್ಯಾಯಾಂಗ ಬಂಧನದಲ್ಲಿ ಕಳೆದ ಅವಧಿಯನ್ನು ಅಮಾನತ್ತಿನಲ್ಲಿದ್ದ ಅವಧಿಯೆಂದು ಪರಿಗಣಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್ ಎಂ ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಎಂ.ಟಿ.ರೇಜು**

ಪಿ.ಆರ್ 51

**ಸರ್ಕಾರದ ಉಪ ಕಾರ್ಯದರ್ಶಿ**

ಸಿಆಸುಇ (ಸೇವೆಗಳು-2)

## ಸಹಕಾರ ಸಚಿವಾಲಯ

**ವಿಷಯ** : 2010-11ನೇ ಸಾಲಿನಲ್ಲಿ ಸಹಕಾರ ಇಲಾಖೆಗೆ ಸಂಬಂಧಪಟ್ಟ ಮುಂದುವರೆದ ಯೋಜನೆಗಳನ್ನು ಅನುಷ್ಠಾನಗೊಳಿಸಿ ಲ್ಯಾಂಪ್ಸ್ ಮಹಾಮಂಡಳಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** (1) ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ ಆಡಳಿತ(3)/ಎಎಸ್‌ಪಿ/ 06/2010-11 ದಿನಾಂಕ: 15-8-2010.

(2) ಸರ್ಕಾರದ ಆದೇಶ ಸಂಖ್ಯೆ: ಸಇ 145 ಸಂಮಾಸ 2010 ದಿನಾಂಕ: 25-10-2010

(3) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಸಇ 145 ಸಂಮಾಸ 2010 ದಿನಾಂಕ: 10-11-2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 15-8-2010ರ ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪ್ರಸ್ತಾವನೆಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ., ಮೈಸೂರು ರವರು ರಾಜ್ಯ ಯೋಜನೆಯಡಿಯಲ್ಲಿ 2010-11ನೇ ಸಾಲಿಗೆ ಲ್ಯಾಂಪ್ಸ್ ಮಹಾಮಂಡಳ ಮತ್ತು ಲ್ಯಾಂಪ್ಸ್ ಸಂಘಗಳಿಗೆ ಮಾರುಕಟ್ಟೆ ಮೂಲಕ ಸೌಕರ್ಯಗಳು ಸ್ಥಾಪನೆಯಾಗಿ 423-ಗಿರಿಜನ ಉಪಯೋಜನೆಯಡಿ ಲೆಕ್ಕ ಶೀರ್ಷಿಕೆ 2425-00-108-0-30 ಅಡಿಯಲ್ಲಿ ರೂ.50-00 ಲಕ್ಷಗಳ ಆಯವ್ಯಯ ಅವಕಾಶವನ್ನು ಸರ್ಕಾರದ ಆದೇಶ ಸಂಖ್ಯೆ: ಸಇ 31 ಅಂಅಸ(ಎ)/2010 ದಿನಾಂಕ 1-4-2010 ರಲ್ಲಿ ಕಲ್ಪಿಸಲಾಗಿದ್ದು, 2010-11ನೇ ಸಾಲಿಗೆ ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳಕ್ಕೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗೆ ಗಿರಿಜನ ಉಪಯೋಜನೆಯಡಿ ರೂ. 50-00 ಲಕ್ಷಗಳ ಅನುದಾನ ಕಲ್ಪಿಸಿದ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿರುತ್ತದೆ.

ಈ ಬಗ್ಗೆ ಮಹಾಮಂಡಳದ ದಿನಾಂಕ: 29-6-2010ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಮಹಾಮಂಡಳಕ್ಕೆ ಮಾರುಕಟ್ಟೆ ಮೂಲಭೂತ ಸೌಕರ್ಯಕ್ಕಾಗಿ ರೂ.6-00 ಲಕ್ಷ ಹಾಗೂ ವಾಹನ ಖರೀದಿಗೆ ಹೆಚ್ಚುವರಿ ಮೊತ್ತ ರೂ. 1.75 ಮಹೇಂದ್ರ ಬೊಲೇರೋ ಕ್ಯಾಂಪರ್ ಖರೀದಿಗೆ ಅನುದಾನ ಅವಶ್ಯಕತೆ ಇದ್ದು ಒಟ್ಟು ರೂ. 7.75 ಲಕ್ಷ ಆರ್ಥಿಕ ಸಹಾಯಧನವನ್ನು ಅನುದಾನವಾಗಿ ಮಹಾಮಂಡಳಕ್ಕೆ ಮಂಜೂರು ಮಾಡುವಂತೆ ಸರ್ಕಾರವನ್ನು ಸಹಕಾರ ಸಂಘಗಳ ನಿಬಂಧಕರ ಮೂಲಕ ಕೋರಲು ತೀರ್ಮಾನಿಸಲಾಗಿರುತ್ತದೆ.

ಇದಲ್ಲದೆ ಸದಸ್ಯ ಲ್ಯಾಂಪ್ಸ್ ಸಹಕಾರ ಸಂಘಗಳು ತಮ್ಮ ವ್ಯವಹಾರವನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವೃದ್ಧಿಸಲು ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗೆ ಅನುದಾನವನ್ನು ಮಂಜೂರು ಮಾಡಬೇಕೆಂದು ಕೋರಿ 17 ಲ್ಯಾಂಪ್ಸ್ ಸಹಕಾರ ಸಂಘಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ದಿನಾಂಕ 29-6-2010ರ ಆಡಳಿತ ಮಂಡಳಿ ಸಭೆಯಲ್ಲಿ 2010-11ನೇ ಸಾಲಿನಲ್ಲಿ ಈ ಮಹಾಮಂಡಳಕ್ಕೆ ಗಿರಿಜನ ಉಪಯೋಜನೆಯಡಿಯಲ್ಲಿ ನಿಗದಿಪಡಿಸಿ ರೂ. 50-00 ಲಕ್ಷ ಅನುದಾನದಲ್ಲಿ ರೂ.42.25 ಲಕ್ಷ ಅನುದಾನವನ್ನು 17 ಸದಸ್ಯ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೂಲಭೂತ ಸೌಕರ್ಯದ ನಿರ್ಮಾಣದ ಬಗ್ಗೆ ಕೆಳಕಂಡಂತೆ ಮಂಜೂರು ಮಾಡಲು ನಿರ್ಣಯಿಸಿ ಶಿಫಾರಸ್ಸು ಮಾಡಿರುತ್ತಾರೆ.

| ಕ್ರಸಂ | ಸಂಘದ ಹೆಸರು | ಅನುದಾನದ ಉದ್ದೇಶ | ಅನುದಾನದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| **1** | **2** | **3** | **4** |
| 1 | ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿ., ಮೈಸೂರು | 1. ಮೂಲಭೂತ ಸೌಕರ್ಯ,<br>2. ವಾಹನ ಖರೀದಿಗೆ ಹೆಚ್ಚುವರಿ ಮೊತ್ತ | 6.00<br>1.75 |
| | | | **7.75** |

| | | | |
|---|---|---|---|
| 2 | ಬಿಳಿಗಿರಿರಂಗನ ಬೆಟ್ಟ ಲ್ಯಾಂಪ್ಸ್ ಸಹಕಾರ ಸಂಘ ನಿ., ಚಾಮರಾಜನಗರ | ಪೀಠೋಪಕರಣಗಳು | 1.00 |
| 3 | ಗುಂಡ್ಲುಪೇಟೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಗುಂಡ್ಲುಪೇಟೆ, ಚಾಮರಾಜನಗರ ಜಿ. | 1. ಮಾರಾಟ ಮಳಿಗೆ<br>2. ಕಂಪ್ಯೂಟರ್ | 2.50<br>0.50 |
| | | | **4.00** |
| 4 | ಮೂಡಿಗೆರೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಮೂಡಿಗೆರೆ, ಚಿಕ್ಕಮಗಳೂರು ಜಿ. | ಸಂಘದ ಆಡಳಿತ ಕಛೇರಿ, ತರಬೇತಿ ಭವನ | 3.00 |
| 5 | ಬಂಟ್ವಾಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ | ಸಂಘದ ವಿಟ್ಲ ಶಾಖೆ | 4.00 |
| 6 | ಕಾರ್ಕಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಕಾರ್ಕಳ, ದ.ಕ. ಜಿಲ್ಲೆ | ಮಾರಾಟ ಮಳಿಗೆ | 4.00 |
| 7 | ಕುಂದಾಪುರ ಲ್ಯಾಂಪ್ಸ್ ಸಹಕಾರ ಸಂಘ ನಿ., ಕುಂದಾಪುರ, ಉಡುಪಿ ಜಿ. | ಮಾರಾಟ ಮಳಿಗೆ | 2.00 |
| 8 | ಪುತ್ತೂರು ಲ್ಯಾಂಪ್ಸ್ ಸಹಕಾರ ಸಂಘ ನಿ., ಪುತ್ತೂರು, ದ.ಕ. ಜಿಲ್ಲೆ | ಮಾರಾಟ ಮಳಿಗೆ ಹಾಗೂ ಗೋದಾಮು | 3.00 |
| 9 | ಸುಳ್ಯ ಲ್ಯಾಂಪ್ಸ್ ಸಹಕಾರ ಸಂಘ ನಿ., ಸುಳ್ಯ, ದ.ಕ. ಜಿಲ್ಲೆ | ಮಾರಾಟ ಮಳಿಗೆ | 3.00 |
| 10 | ತಿತಿಮತಿ ಲ್ಯಾಂಪ್ಸ್ ಸಹಕಾರ ಸಂಘ ನಿ., ತಿತಿಮತಿ ಕೊಡಗು ಜಿಲ್ಲೆ | ವ್ಯಾಪಾರ ಮಳಿಗೆಗಳು | 2.00 |
| 11 | ಯಲ್ಲಾಪುರ ಲ್ಯಾಂಪ್ಸ್ ಸಹಕಾರ ಸಂಘ ನಿ., ಉತ್ತರ ಕನ್ನಡ ಜಿಲ್ಲೆ | ಮೂಲಭೂತ ಸೌಕರ್ಯ | 1.50 |
| 12 | ಭಟ್ಕಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಉತ್ತರ ಕನ್ನಡ ಜಿಲ್ಲೆ | ಪೀಠೋಪಕರಣ, ವೆಹಿಕಲ್ ಶೆಡ್ | 1.00 |
| 13 | ಭಾಗಮಂಡಲ ಲ್ಯಾಂಪ್ಸ್ ಸಹಕಾರ ಸಂಘ ನಿ., ಕೊಡಗು ಜಿಲ್ಲೆ | ಜನರೇಟರ್ | 0.50 |
| 14 | ಕೊಪ್ಪ ಲ್ಯಾಂಪ್ಸ್ ಸಹಕಾರ ಸಂಘ ನಿ., ಚಿಕ್ಕಮಗಳೂರು ಜಿಲ್ಲೆ | ಜೇನು ಸಂಸ್ಕರಣಾ ಘಟಕ | 6.00 |
| 15 | ಮಂಗಳೂರು ಲ್ಯಾಂಪ್ಸ್ ಸಹಕಾರ ಸಂಘ ನಿ., ದಕ್ಷಿಣ ಕನ್ನಡ ಜಿಲ್ಲೆ | ಬ್ಯಾಂಕಿಂಗ್ ಕೌಂಟರ್ ಮತ್ತು ಲಾಕರ್ | 3.00 |
| 16 | ಹೆಚ್.ಡಿ.ಕೋಟೆ ಲ್ಯಾಂಪ್ಸ್ ಸಹಕಾರ ಸಂಘ ನಿ., ಮೈಸೂರು ಜಿಲ್ಲೆ | 1. ಸ್ಟೀಲ್ ಡ್ರಂ<br>2. ಪೀಠೋಪಕರಣಗಳು<br>3. ವಿದ್ಯುಥೀಕರಣ | 0.25<br>0.25<br>0.25 |
| | | | **0.75** |
| 17 | ಹುಣಸೂರು ಲ್ಯಾಂಪ್ಸ್ ಸಹಕಾರ ಸಂಘ ನಿ., ಮೈಸೂರು ಜಿಲ್ಲೆ | 1. ದಾಸ್ತಾನು ಮಳಿಗೆ<br>2. ವ್ಯಾಪಾರ ಮಳಿಗೆ<br>3. ವಾಹನದ ಶೆಡ್ | 1.50<br>1.00<br>0.50 |
| | | | **3.00** |
| 18 | ಹಳಿಯಾಳ ಲ್ಯಾಂಪ್ಸ್ ಸಹಕಾರ ಸಂಘ ನಿ., ಹಳಿಯಾಳ, ಉ.ಕ.ಜಿಲ್ಲೆ | ನಿವೇಶನದಲ್ಲಿ ಕಛೇರಿ, ಮಾರಾಟ ಮಳಿಗೆ, ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾಗಾರ | 1.50 |
| | | ಒಟ್ಟು | **50.00** |
| | **(ರೂಪಾಯಿ ಐವತ್ತು ಲಕ್ಷಗಳು ಮಾತ್ರ)** | | |

2009-10 ನೇ ಸಾಲಿನಲ್ಲಿ ಪುತ್ತೂರು ಲ್ಯಾಂಪ್ಸ್ ಸಹಕಾರ ಸಂಘಕ್ಕೆ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಮಳಿಗೆಗಾಗಿ ರೂ. 4.00 ಲಕ್ಷ ಅನುದಾನ ಮಂಜೂರಾಗಿರುತ್ತದೆ. ಇದರಲ್ಲಿ ಪುತ್ತೂರು ಕಸಬಾ ಗ್ರಾಮದ ಸರ್ವೆ ನಂ. 298-2ಎ2ರಲ್ಲಿ ವಿಸ್ತೀರ್ಣ 0.05 ಎಕರೆ ಸ್ಥಳದಲ್ಲಿ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಮಳಿಗೆ ನಿರ್ಮಿಸಲಾಗಿರುತ್ತದೆ.

2010–11ನೇ ಸಾಲಿನಲ್ಲಿ ಮಾರಾಟ ಮಳಿಗೆ ಹಾಗೂ ಗೋದಾಮಿಗೆ ರೂ.3.00 ಲಕ್ಷ ಅವಕಾಶ ಕಲ್ಪಿಸಿರುವುದು ಬಡಗನ್ನೂರು ಶಾಖೆಯಲ್ಲಿ ದಿನಸಿ ಮಾರಾಟ ಮಳಿಗೆ ಹಾಗೂ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾ ಗೋದಾಮು ನಿರ್ಮಿಸಲು ಅನುದಾನವನ್ನು ಕೋರಲಾಗಿದೆ.

2009–10ನೇ ಸಾಲಿನಲ್ಲಿ ಸುಳ್ಯ ಲ್ಯಾಂಪ್ಸ್ ಸಹಕಾರ ಸಂಘಕ್ಕೆ ಕೇಂದ್ರ ಕಛೇರಿಯಲ್ಲಿ ಖಾಲಿ ಇರುವ ನಿವೇಶನದಲ್ಲಿ 2010–11ನೇ ಸಾಲಿನಲ್ಲಿ ಅಮರ ಷಡ್ನೂರು ಗ್ರಾಮದ ಚುಕ್ಕಾಡಿ ಶಾಖೆಯೂ ಈಗ ಸಣ್ಣ ಕಟ್ಟಡದಲ್ಲಿ ನಡೆಯುತ್ತಿರುವುದರಿಂದ ದೊಡ್ಡ ಪ್ರಮಾಣದಲ್ಲಿ ವ್ಯವಹಾರವನ್ನು ನಡೆಸಲು ಅನುಕೂಲವಾಗಲು ಕಟ್ಟಡವನ್ನು ನಿರ್ಮಾಣ ಮಾಡಲು ರೂ. 3.00 ಲಕ್ಷ ಅನುದಾನ ಕೋರಿರುವುದಾಗಿಯೂ ಸಹ ದಿನಾಂಕ: 12–7–2010ರ ಪತ್ರದಲ್ಲಿ ತಿಳಿಸಿರುತ್ತಾರೆ.

2010–11 ನೇ ಸಾಲಿಗೆ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಲೆಕ್ಕ ಶೀರ್ಷಿಕೆ 2425–00–1080–30–423 ಗಿರಿಜನ ಉಪಯೋಜನೆಯಡಿ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗಾಗಿ ರೂ.50–00 ಲಕ್ಷ ಅನುದಾನ ಮಂಜೂರು ಮಾಡಲು ಸರ್ಕಾರ ಅವಕಾಶ ಮಾಡಿಕೊಳ್ಳಲಾಗಿದೆ. ಈ ಅನುದಾನವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮ 2000 ಅನ್ನು ಪಾಲಿಸುವ ಷರತ್ತುಗಳಿಗೊಳಪಟ್ಟು ಮೇಲ್ಕಂಡಂತೆ ಲ್ಯಾಂಪ್ಸ್ ಮೂಲಕ 17 ಲ್ಯಾಂಪ್ಸ್ ಸಂಘಗಳಿಗೆ 42.25 ಲಕ್ಷಗಳನ್ನು ಬಿಡುಗಡೆ ಮಾಡಿದ ಅನುದಾನವನ್ನು ಲ್ಯಾಂಪ್ಸ್ ಮಹಾಮಂಡಳದ ಮೂಲಕ 17 ಲ್ಯಾಂಪ್ಸ್ ಸಂಘಗಳಿಗೆ 42.25 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ ರವರಿಗೆ ಅಧಿಕಾರ ನೀಡಲು ಕೋರಿರುತ್ತಾರೆ.

ಮೇಲೆ ವಿವರಿಸಿರುವಂತೆ, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಮಹಾಮಂಡಳ, ಮೈಸೂರು ಇದಕ್ಕೆ ಮೂಲಭೂತ ಸೌಕರ್ಯಗಳಿಗಾಗಿ ರೂ. 7.75 ಲಕ್ಷಗಳನ್ನು, 17 ಲ್ಯಾಂಪ್ಸ್ ಸಂಘಗಳಿಗೆ ರೂ. 42.25 ಲಕ್ಷ ಹೀಗೆ ಒಟ್ಟು ರೂ. 50–00 ಲಕ್ಷ ಅನುದಾನವನ್ನು 423 ಗಿರಿಜನ ಉಪಯೋಜನೆ ಲೆಕ್ಕ ಶೀರ್ಷಿಕೆ 2425–00–108–0–39 ರಡಿ ಮಂಜೂರು ಮಾಡಲು ಶಿಫಾರಸ್ಸು ಮಾಡಿ ಪೂರ್ಣ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಸರ್ಕಾರದ ದಿನಾಂಕ: 25–10–2010ರ ಆದೇಶದಲ್ಲಿ, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಮಹಾಮಂಡಳ, ಮೈಸೂರು ಇದಕ್ಕೆ 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–30–423 ಅಡಿಯಲ್ಲಿ ರೂ. 50.0 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಿದ್ದು, ಪ್ರತ್ಯಾಯೋಜಿತ ಅಧಿಕಾರಗಳನ್ವಯ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ಸರ್ಕಾರದ ದಿನಾಂಕ: 10–11–2010ರ ತಿದ್ದುಪಡಿ ಆದೇಶದಲ್ಲಿ, ದಿನಾಂಕ: 25–10–2010ರ ಆದೇಶದ ಭಾಗದಲ್ಲಿನ 2ನೇ ಕಂಡಿಕೆಯ ಬದಲಾಗಿ ನಾಲ್ಕು ಷರತ್ತುಗಳನ್ನು ಸೇರ್ಪಡಿಸಿ ಆದೇಶ ಹೊರಡಿಸಲಾಗಿತ್ತು.

ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ಇವರ ದಿನಾಂಕ: 15–8–2010ರ ಪತ್ರದಲ್ಲಿ ರೂ. 50.00 ಲಕ್ಷಗಳ ಆಯವ್ಯಯ ಬಿಡುಗಡೆ ಮಾಡಲು ಕೋರಿದ್ದು, ಅದರಂತೆ ದಿನಾಂಕ: 25–10–2010ರ ಸರ್ಕಾರದ ಆದೇಶದಲ್ಲಿ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಉಳಿದ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸ ಇ 145 ಸಂಮಾಸ 2010 ಬೆಂಗಳೂರು, ದಿನಾಂಕ: 4–12–2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯ್ಲಲಿ, ಕರ್ನಾಟಕ ರಾಜ್ಯ ಲ್ಯಾಂಪ್ಸ್ ಮಹಾಮಂಡಳ, ಮೈಸೂರು ಇದಕ್ಕೆ 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–30–423 ಅಡಿಯಲ್ಲಿ ರೂ.50.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಿದ್ದು, ಪ್ರತ್ಯಾಯೋಜಿತ ಅಧಿಕಾರಗಳನ್ವಯ ಸರ್ಕಾರದ ದಿನಾಂಕ: 25–10–2010ರ ಆದೇಶದಲ್ಲಿ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಉಳಿದ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತುಗಳೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

(1) ಈ ಸಹಾಯಧನ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–30–423 (ಯೋಜನೆ) ಇದರ ಅಡಿಯಲ್ಲಿ ಭರಿಸತಕ್ಕದ್ದು.

(2) ಲ್ಯಾಂಪ್ಸ್ ಸಹಕಾರ ಮಹಾಮಂಡಳ, ಮೈಸೂರು ಇದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸತಕ್ಕದ್ದು.

(3) ಸಹಕಾರ ಸಂಘಗಳ ನಿಬಂಧಕರು ಮಹಾಮಂಡಳವು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು ಮತ್ತು ಅನುದಾನದ ವಿನಿಯೋಗದ ಬಗ್ಗೆ ಪ್ರಮಾಣ ಪತ್ರ ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(4) ಬಿಡುಗಡೆ ಮಾಡಿದ ಅನುದಾನ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ ಇವರಿಗೆ ಅಧಿಕಾರ ನೀಡಿದೆ.

(5) ಈ ಅನುದಾನವನ್ನು ಯಾವುದೇ ವಾಹನ ಖರೀದಿ ಅಥವಾ ಹುದ್ದೆಗಳ ಸೃಜನೆಗೆ ಉಪಯೋಗಿಸಬಾರದು.

ಈ ಆದೇಶವನ್ನು ಸಹಕಾರ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸ ಇ 94 ಆಂಆಸ 2010 ದಿನಾಂಕ: 19–11–2010ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್ 52

## ಸಹಕಾರ ಸಚಿವಾಲಯ

**ವಿಷಯ** : ಬಿ.ಡಿ.ಎ. ಫ್ಲಾಟ್ 1ನೇ ಫೇಸ್, ಓನರ್ಸ್/ಅಲಾಟೀಸ್ ಅಸೋಸಿಯೇಷನ್, ಕಲ್ಲಹಳ್ಳಿ ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ** : 1) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್/ಎಸ್ಒಆರ್/ಪಿಟಿಎನ್/162/2010-11/1516, ದಿನಾಂಕ: 21-5-2010.

2) ಕಾರಣ ಕೇಳುವ ನೋಟಿಸ್ ಸಂಖ್ಯೆ: ಸಇ 70 ಸಸಂನೋ 2010, ದಿನಾಂಕ: 6-7-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ದಿನಾಂಕ: 21-5-2010 ರ ಪತ್ರದಲ್ಲಿ, ಬಿ.ಡಿ.ಎ. ಫ್ಲಾಟ್ 1ನೇ ಫೇಸ್, ಓನರ್ಸ್/ಅಲಾಟೀಸ್ ಅಸೋಸಿಯೇಷನ್, ಕಲ್ಲಹಳ್ಳಿ ಬೆಂಗಳೂರು ಈ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರೀತ್ಯ ನೋಂದಣಿ ಸಂಖ್ಯೆ: 1095/2003-04 ರಂತೆ ನೋಂದಣಿಯಾಗಿದ್ದು, ನಿಯಮಗಳ ಪ್ರಕಾರ ಸಂಘದವರು ಪ್ರತಿ ವರ್ಷ ಸರ್ವ ಸದಸ್ಯರ ಸಭೆಯನ್ನು ನಡೆಸಿ, ಲೆಕ್ಕಪತ್ರಗಳನ್ನು ಅನುಮೋದನೆ ಪಡೆದು ನೋಂದಣಾಧಿಕಾರಿಗಳಿಗೆ ಸರ್ವ ಸದಸ್ಯರ ಸಭೆ ಮುಗಿದ 14 ದಿನಗಳೊಳಗಾಗಿ ಫೈಲಿಂಗ್ ಮಾಡಬೇಕಾಗಿರುತ್ತದೆ. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 13 ರ ರೀತ್ಯ ಸಲ್ಲಿಸಬೇಕಾಗಿದ್ದು, ಸಕಾರಣಗಳಿದ್ದಲ್ಲಿ ಸರ್ಕಾರಕ್ಕೆ ದಂಡ ಶುಲ್ಕ ರೂ. 100/- ಗಳನ್ನು ವಾರ್ಷಿಕವಾಗಿ ಪಾವತಿ ಮಾಡಿಸಿಕೊಂಡು ವಿಳಂಬ ಮನ್ನಾ ಮಾಡುವ ಅವಕಾಶ ನೋಂದಣಾಧಿಕಾರಿಗಳಿಗೆ ಇದ್ದು, ಸಂಘದ ಸದಸ್ಯರಲೊಬ್ಬರಾದ ಶ್ರೀ ಜಿ. ಪಾಂಡಿಯನ್ ರವರು ದಿನಾಂಕ: 29-8-2008 ರಂದು ಮನವಿ ಸಲ್ಲಿಸಿ, ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರಂತೆ ಲೆಕ್ಕಪತ್ರಗಳನ್ನು ಸಲ್ಲಿಸುತ್ತಿಲ್ಲವೆಂದು ದೂರು ನೀಡಿದ್ದು, ಸದರಿ ದೂರಿನ ಆಧಾರದ ಮೇಲೆ ಸದರಿ ಸಂಘಕ್ಕೆ ದಿನಾಂಕ: 1-9-2008 ರಂದು ಪತ್ರ ಬರೆದು ಅನುಪಾಲನೆ ಕೇಳಲಾಗಿದ್ದು, ಸಂಘದವರು ಅನುಪಾಲನೆ ಸಲ್ಲಿಸದಿದ್ದ ಕಾರಣ ಮತ್ತೊಮ್ಮೆ ದಿನಾಂಕ 9-12-2009 ರಂದು ಅಂತಿಮ ತಿಳುವಳಿಕೆ ಪತ್ರ ಬರೆಯಲಾಗಿದ್ದು, ಸಂಘದ ಕಾರ್ಯದರ್ಶಿಯವರು ದಿನಾಂಕ: 10-2-2009 ರಂದು ಪತ್ರ ಬರೆದು ದಿನಾಂಕ: 22-2-2009 ರಂದು ಸರ್ವ ಸದಸ್ಯರ ಸಭೆ ನಿಗದಿಯಾಗಿದ್ದು, ಅನುಪಾಲನೆ ಹಾಗೂ ದಾಖಲೆಗಳನ್ನು ಸಲ್ಲಿಸುವುದಾಗಿ ತಿಳಿಸಿ ಪತ್ರ ಬರೆದಿರುತ್ತಾರೆ.

ಸಂಘದವರು ಮಾಹಿತಿಯನ್ನು ನೀಡದ ಕಾರಣ ದಿನಾಂಕ: 11-3-2009 ಮತ್ತು 26-5-2009 ರಂದು ಸಹಕಾರ ಸಂಘಗಳ ನಿಬಂಧಕರ ಕಛೇರಿಯಿಂದ ಕಾರಣ ಕೇಳುವ ನೋಟೀಸು ಜಾರಿಗೊಳಿಸಲಾಗಿರುತ್ತದೆ. ಆದರೂ ಸಹ ಸದರಿ ಸಂಘದವರು ಅನುಪಾಲನೆ ವರದಿಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ, ಶ್ರೀ ಹೆಚ್.ಪಿ. ಕುಮಾರ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರನ್ನು ಸದರಿ ಸಂಘಕ್ಕೆ ಭೇಟಿ ನೀಡಲು ನಿಯೋಜಿಸಲಾಗಿತ್ತು. ಅದರಂತೆ ಶ್ರೀ ಹೆಚ್.ಪಿ. ಕುಮಾರ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರು ದಿನಾಂಕ: 13-5-2010 ರಂದು ವಿವರವಾದ ವರದಿಯನ್ನು ಸಲ್ಲಿಸಿದ್ದು, ಈ ಕೆಳಕಂಡ ಅಂಶಗಳನ್ನು ಗಮನಿಸಲಾಗಿರುತ್ತದೆ.

1) ಬಿ.ಡಿ.ಎ. ಫ್ಲಾಟ್ 1ನೇ ಫೇಸ್, ಓನರ್ಸ್/ಅಲಾಟೀಸ್ ಅಸೋಸಿಯೇಷನ್, ಕಲ್ಲಹಳ್ಳಿ ಬೆಂಗಳೂರು ಈ ಸಂಘವು ಈ ತಹಲ್‌ವರೆವಿಗೆ ಲೆಕ್ಕಪತ್ರಗಳು, ಸರ್ವ ಸದಸ್ಯರ ಸಭೆಯ ನಡವಳಿ, ಕಾರ್ಯಕಾರಿ ಸಮಿತಿಯ ಪಟ್ಟಿಯನ್ನು ಕಲಂ 13 ರೀತ್ಯ ಸಲ್ಲಿಸದಿರುವುದು.
2) ಸಂಘವು ಕಾಯ್ದೆಯ ಕಲಂ 11 ರಂತೆ ಪ್ರತಿವರ್ಷ ಸರ್ವ ಸದಸ್ಯರ ಸಭೆಯನ್ನು ನಡೆಸಿ ಲೆಕ್ಕಪರಿಶೋಧನೆ ಮಾಡಿಸಿ ಅನುಮೋದನೆ ಪಡೆದ ಬಗ್ಗೆ ಯಾವುದೇ ದಾಖಲೆ ಸಲ್ಲಿಸದಿರುವುದು.
3) ಅಧಿಕಾರಿಗಳಿಗೆ ದಿನಾಂಕ: 4-5-2010 ರಂದು ಸಂಘದ ಕಾರ್ಯದರ್ಶಿಯವರಿಗೆ ಪತ್ರ ಬರೆದು ಹೇಳಿಕೆ ಮತ್ತು ದಾಖಲೆಗಳನ್ನು ಸಲ್ಲಿಸುವಂತೆ ತಿಳಿಸಿದಾಗ್ಯೂ, ಹೇಳಿಕೆ ಮತ್ತು ದಾಖಲೆಗಳನ್ನು ಸಲ್ಲಿಸದಿರುವುದು.
4) ನಿಯಮಾನುಸಾರ ಚುನಾವಣೆ ನಡೆಸಿದ ಬಗ್ಗೆ ಸಂಘದವರು ಯಾವುದೇ ಮಾಹಿತಿ ನೀಡಿರುವುದಿಲ್ಲ.

ಆದ್ದರಿಂದ, ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ರೀತ್ಯ ಲೆಕ್ಕಪತ್ರಗಳನ್ನು ಫೈಲಿಂಗ್ ಮಾಡದೇ, ಸರ್ವ ಸದಸ್ಯರ ಸಭೆ ಮತ್ತು ಚುನಾವಣೆ ನಡೆಸದೇ ಹಾಗೂ ಇಲಾಖೆಗೆ ಮಾಹಿತಿ/ಅನುಪಾಲನೆಯನ್ನು ಸಲ್ಲಿಸಲು ವಿಫಲರಾಗಿರುವುದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ರನ್ವಯ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಬಿ.ಡಿ.ಎ. ಫ್ಲಾಟ್ 1ನೇ ಫೇಸ್, ಓನರ್ಸ್/ಅಲಾಟೀಸ್ ಅಸೋಸಿಯೇಷನ್, ಕಲ್ಲಹಳ್ಳಿ ಬೆಂಗಳೂರು ಈ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದು, ಸಂಘದ ಸದಸ್ಯರ ಹಿತದೃಷ್ಟಿಯಿಂದ ಹಾಗೂ ಸ್ವೀಕೃತವಾದ ದೂರಿನಲ್ಲಿರುವ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ಸಲ್ಲಿಸುವಂತೆ, ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ದಿನಾಂಕ: 5/8-7-2010 ರ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು.

ಸರ್ಕಾರವು ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿಗೆ ಈವರೆವಿಗೂ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರು ಲಿಖಿತ ಉತ್ತರ ನೀಡಿರುವುದಿಲ್ಲ. ಆದ್ದರಿಂದ, ಸಂಸ್ಥೆಯ ಹಿತದೃಷ್ಟಿಯಿಂದ ಮತ್ತು ಸಂಘದ ಸುಸೂತ್ರ ಆಡಳಿತಕ್ಕಾಗಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರಂತೆ ಆಡಳಿತಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 70 ಸಸಂನೋ 2010, ಬೆಂಗಳೂರು, ದಿನಾಂಕ: 4-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ.ಡಿ.ಎ. ಫ್ಲಾಟ್ 1ನೇ ಫೇಸ್, ಓನರ್ಸ್/ಅಲಾಟೀಸ್ ಅಸೋಸಿಯೇಷನ್, ಕಲ್ಲಹಳ್ಳಿ ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 53

## ಸಹಕಾರ ಸಚಿವಾಲಯ

**ವಿಷಯ** : ನಂಜನಗೂಡು ತಾಲ್ಲೂಕು ಉಪಾಧ್ಯಾಯರುಗಳ ಸಹಕಾರ ಸಂಘ ನಿ. ಇದಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಪದನಿಮಿತ್ತ ಅಧ್ಯಕ್ಷರಾಗಿರುವುದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರ ರೀತ್ಯಾ ವಿನಾಯಿತಿ ದೊರಕಿಸಿಕೊಡುವ ಬಗ್ಗೆ

**ಓದಲಾಗಿದೆ** : ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರಸಂಖ್ಯೆ: ಒಟಿ.ಎಸ್–2/12/ಹೆಚ್‌ಓಟಿ/2010–2011, ದಿನಾಂಕ: 09–07–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 09–07–2010ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ನಂಜನಗೂಡು ತಾಲ್ಲೂಕು ಉಪಾಧ್ಯಾಯರುಗಳ ಸಹಕಾರ ಸಂಘ ನಿ., ನಂಜನಗೂಡು ಇದು ಪತ್ತಿನ ಸಹಕಾರ ಸಂಘವಾಗಿದ್ದು, ದಿನಾಂಕ: 20–10–1952ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ ಇವರಿಂದ ನೋಂದಾಯಿಸಲ್ಪಟ್ಟಿರುತ್ತದೆ. ಸದರಿ ಸಂಘಕ್ಕೆ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಪದನಿಮಿತ್ತ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು, ಅವರ ಅಧ್ಯಕ್ಷತೆಯಲ್ಲಿ ಸದರಿ ಸಂಘವು ಒಳ್ಳೆಯ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಶೇ. 100 ರಷ್ಟು ವಸೂಲಾತಿ ಮಾಡುತ್ತಿದ್ದಾರೆ. ಆದ್ದರಿಂದ ಇನ್ನು ಮುಂದೆಯೂ ಸಹ ಸಂಘದ ಪದನಿಮಿತ್ತ ಅಧ್ಯಕ್ಷರಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳೇ ಮುಂದುವರಿಯಬಹುದೆಂದು ಸರ್ಕಾರದಿಂದ ಸೂಕ್ತ ವಿನಾಯಿತಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರಕರಣ 29ಎಫ್ ನಿಂದ ವಿನಾಯಿತಿ ನೀಡಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಹಾಗೂ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸಹಕಾರ ಸಂಘದ ಎಲ್ಲಾ ಸದಸ್ಯರ ಹಿತದೃಷ್ಟಿಯಿಂದ ಈ ರೀತಿ ಕ್ಷೇತ್ರ ಶಿಕ್ಷಣಾಧಿಕಾರಿಗಳೇ ಅಧ್ಯಕ್ಷರಾಗಿ ಮುಂದುವರಿಯಲು ವಿನಾಯಿತಿ ನೀಡುವುದು ಸೂಕ್ತವಾಗಿರುತ್ತದೆಂದು ನಿರ್ಣಯಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 116 ಸಸಂನೋ 2010, ಬೆಂಗಳೂರು, ದಿನಾಂಕ: 09–12–2010**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮ ಪ್ರಕರಣ 29ಎಫ್, (1), (4), (5) ಮತ್ತು (6) ರ ಉಪಬಂಧಗಳು ಅಧ್ಯಕ್ಷರ ಚುನಾವಣೆಗೆ ಸಂಬಂಧಪಟ್ಟಂತೆ ನಂಜನಗೂಡು ತಾಲ್ಲೂಕು ಉಪಾಧ್ಯಾಯರುಗಳ ಸಹಕಾರ ಸಂಘ ನಿಯಮಿತ, ಮಹದೇಶ್ವರ ಲೇಔಟ್, ಹುಲ್ಲಹಳ್ಳಿ ರಸ್ತೆ, ನಂಜನಗೂಡು ಇದಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು ನಿರ್ದೇಶಿಸುತ್ತದೆ. ಈ ವಿನಾಯಿತಿಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ, ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 54

## PERSONNEL AND ADMINISTRATIVE REFORMS SECRETARIAT

**Sub :-** Writing of Performance Appraisal Report-determination of Authorities-reg

**Read :-** 1. Government Order No. DPAR 137 SPS 2009, dated 23-10-2009 and 22-04-2010.

2. Letter No. NGO (1) 125/96/97 dated 12-11-2010 of DG & IGP, Bangalore.

***

**Preamble:**

In the Government order dated 23-10-2009 and 22-04-2010 read at (1) above the State Government has prescribed the Reporting Reviewing and Accepting Authorities in respect of various categories of posts held by IPS officers of Karnataka in police departments and in Non-police organizations in the State. In the letter read at (2) above the DG & IGP has requested that consequent upon creation of certain new cadre posts by the Ministry of Home Affairs, GOI, during Cadre Review and also in respect of certain posts which are not include in earlier Government orders, appropriate authorities have to be prescribed to write their Performance Appraisal Report (PAR).

Hence the following orders are issued.

**Government Order No. DPAR 221 SPS 2010, Bangalore, dated : 21-12-2010**

In continuation of Government Order dated: 23/10/2009 and 22/04/2010 read at Sl No. (1) above, and in exercise of powers conferred u/r 5(1) of AIS (PAR) Rules, the State Government hereby prescribe the Reporting, Reviewing and Accepting Authorities in respect of following posts for the purpose of writing PARs.

| SL. No. | NAME OF THE POST | REPORTING AUTHORITY | REVIEWING AUTHORITY | ACCEPTING AUTHORITY |
|---|---|---|---|---|
| 1 | DGP Training | CS | **Home Minister** | **Chief Minister** |
| 2 | ADGP (Grievances & Human Rights) | DG & IGP | CS | CM |
| 3 | ADGP (CTRS) | DG & IGP | CS | CM |
| 4 | ADGP (Railways) | DG & IGP | CS | CM |
| 5 | ADGP (CID) | DGP CID | DG& IGP | CS |
| 6 | ADGP (Economic Offences. CID) | DGP CID | DG & IGP | CS |
| 7 | ADGP (Forest) | DGP CID | DG & IGP | CS |
| 8 | DIGP (ISD) | IGP, ISD | ADG, ISD | DG & IGP |
| 9 | DIGP (Prisons) | ADGP (Prisons) | CS | Minister Concerned |
| 10 | **Commissioner of Police (Mangalore City)** | ADGP (Law and Order) | DG & IGP | CS |
| 11 | **DCP (Admin) Bangalore City** | **Addl. CP (Admin, Bangalore)** | **Commissioner of Police Bangalore** | DG & IGP |
| 12 | **DCP (Mysore City**) | **Commissioner of Police Mysore City** | ADGP (Law & Order) | DG & IGP |
| 13 | **DCP (Hubli/ Dharwad City)** | **Commissioner of Police (Hubli Dharwad City)** | ADGP (Law & Order) | DG & IGP |
| 14 | SP (ISD) | DIGP (ISD) | IGP (ISD) | ADGP (ISD) |
| 15 | SP (CID) **Cyber** | DIGP **(Economic Offences. CID)** | IGP (Economic Offences. CID) | DGP CID |
| 16 | SP (KSRP) | DIGP (KSRP) | IGP (KSRP) | ADGP, KSRP |

This order shall be applicable to PARs for the reporting year 2009-10 (ending 31-03-2010) and onwards.

By Order and in the name of the Governor of Karnataka
**Ashok P. Atre**
Under Secretary to Government
DPAR (Services-4)

P.R. 55

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎನ್ ಎಂ. ನೀಲಕಂಠ, ಕೆ.ಎ.ಎಸ್ (ಕಿರಿಯ ಶ್ರೇಣಿ), ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರ ವಿರುದ್ಧ ಇಲಾಖಾ ವಿಚಾರಣೆ– ಅಂತಿಮ ಆದೇಶ.

**ಓದಲಾಗಿದೆ** :
1. ದಿನಾಂಕ: 19–06–07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 075 ಎಸ್ಇಎನ್ 06
2 ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ ಅಅಂ ಬಳಿ 39/07–08, ದಿನಾಂಕ: 21–10–09
**3**. ದಿನಾಂಕ: 10–02–10 ರ ನೋಟೀಸು ಸಂಖ್ಯೆ: ಸಿಆಸುಇ 069 ಕೆಇವಿ 07

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ, ಶ್ರೀ ಎನ್. ಎಂ. ನೀಲಕಂಠ ಕೆಎಎಸ್ (ಕಿರಿಯ ಶ್ರೇಣಿ) ಇವರು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ (1) 35 ಕಡತಗಳನ್ನು ಸಕಾಲದಲ್ಲಿ ವಿಲೇ ಮಾಡದೇ ಬಾಕಿ ಇಟ್ಟಿರುವುದು (2) ಕರಿನಂಜನಾಪುರ ಗ್ರಾಮದ 01–00 ಎಕರೆ ಜಮೀನಿನ ಭೂ ಪರಿವರ್ತನಾ ಆದೇಶಕ್ಕೆ ತಾವೇ ಸಹಿ ಮಾಡಿರುವುದು (3) ಚಾಮರಾಜನಗರ ತಾಲ್ಲೂಕು ಭೂ ನ್ಯಾಯಮಂಡಳಿಯ ಅಧ್ಯಕ್ಷರಾಗಿದ್ದಾಗ ಕೆಲವು ಪ್ರಕರಣಗಳಲ್ಲಿ ನಾಮನಿರ್ದೇಶಿತ ಸದಸ್ಯರ ಒಪ್ಪಿಗೆ ಪಡೆಯದೇ ಏಕಪಕ್ಷೀಯವಾಗಿ ತೀರ್ಮಾನಿಸಿರುವುದು (4) ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯ ಹೆಚ್ಚುವರಿ ಪ್ರಭಾರೆಯಲ್ಲಿದ್ದಾಗ, ಭೂ ಪರಿಹಾರ ಪ್ರಕರಣಗಳಲ್ಲಿ ನ್ಯಾಯಾಲಯ ಜಪ್ತಿ ಆದೇಶವನ್ನು ಹೊರಡಿಸಿದ್ದರೂ, ಹೆಚ್ಚುವರಿ ಪರಿಹಾರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯಲು ಕ್ರಮವಹಿಸದಿರುವುದು (5) ಜೀತ ಪದ್ಧತಿ ಸಮೀಕ್ಷೆಗೆ ಸಂಬಂಧಿಸಿದ ಪ್ರಾಮುಖ್ಯವಾದ ಕಡತದಲ್ಲಿ ಯಾವುದೇ ಸಲಹೆ ನಮೂದಿಸದೇ, ಎರಡೂವರೆ ತಿಂಗಳುಗಳ ಕಾಲ ವಿಳಂಬವಾಗಿ ಮಂಡಿಸಿರುವುದು (6) ಚಾಮರಾಜನಗರ ಪುರಸಭೆಯ ಆಯುಕ್ತರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರೆಯಲ್ಲಿದ್ದಾಗ ನಿಯಮಗಳನ್ನು ಉಲ್ಲಂಘಿಸಿ ನಗರಸಭೆಯ 31 ಕಾಮಗಾರಿಗಳನ್ನು ತುಂಡು ಗುತ್ತಿಗೆ ಆಧಾರದ ಮೇಲೆ ನಿರ್ವಹಿಸಲು ಆದೇಶಿಸಿರುವುದು (7) ಜ್ಯೋತಿಗೌಡನಪುರಕ್ಕೆ ಸೇರಿದ ದರಕಾಸ್ತು

ಜಮೀನನ್ನು ಹಿಡುವಳಿ ಜಮೀನೆಂದು ಗಣಿ ಮತ್ತು ಭೂ ವಿಜ್ಞಾನ ಇಲಾಖೆಗೆ ಸ್ವತಃ ವರದಿ ನೀಡಿರುವ ಆರೋಪಗಳಲ್ಲಿನ ಸತ್ಯಾಸತ್ಯತೆಯ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಎನ್ ಎಂ. ನೀಲಕಂಠ ಅಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರ ವಿರುದ್ಧ ಮಾಡಲಾದ ಆರೋಪಗಳು ಕೆಳಕಂಡ ಕಾರಣಗಳಿಂದಾಗಿ ಸಾಬೀತಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ.

1) ಇವರು ವರ್ಗಾವಣೆಗೊಂಡು ಹುದ್ದೆಯ ಪ್ರಭಾರೆಯನ್ನು ವಹಿಸಿಕೊಟ್ಟ ನಂತರ ಇವರ ಕೊಠಡಿಯಲ್ಲಿನ ಅಲ್ಮೇರಾವನ್ನು ನಕಲಿ ಕೀಯಿಂದ ತೆರೆದಾಗ ಅದರಲ್ಲಿ 35 ಕಡತಗಳು ಕಂಡುಬಂದಿರುತ್ತದೆ.
2) ವಿಷಯ ನಿರ್ವಾಹಕರು ಮಂಡಿಸಿದ ಗಣಕೀಕೃತ ಅಧಿಕೃತ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಪರವಾಗಿ ಎಂದು ನಮೂದಿಸಿದ್ದರೂ ಸಹ ಶ್ರೀ ನೀಲಕಂಠ ರವರು ಇದನ್ನೇ ಕರಡು ಆದೇಶವೆಂದು ಪರಿಗಣಿಸಿ, ಜಿಲ್ಲಾಧಿಕಾರಿಗಳ ಅನುಮೋದನೆ ಪಡೆಯದೇ, ತಾವೇ ಸಹಿ ಮಾಡಿರುವುದು.
3) ಭೂ ನ್ಯಾಯಮಂಡಳಿಯ ಆದೇಶ ಘೋಷಿಸಿರುವ ಬಗ್ಗೆ ಆದೇಶದ ಹಾಳೆಯಲ್ಲಿ ನಮೂದಿಸದಿರುವುದು, ಆದೇಶಕ್ಕೆ ಸದಸ್ಯರ ಸಹಿ ಇಲ್ಲದಿರುವುದು ಮತ್ತು ಶ್ರೀ ನೀಲಕಂಠ ರವರು ಮಾತ್ರ ಆದೇಶಕ್ಕೆ ಸಹಿ ಮಾಡಿರುವುದು.
4) ನ್ಯಾಯಾಲಯದಿಂದ ಜಪ್ತಿಯಾದ ನಂತರ, ಹಣ ಬಿಡುಗಡೆ ಮಾಡುವಂತೆ ಕೋರಿ ಆಪಾದಿತರು ದಿನಾಂಕ: 06–07–04 ರಂದು ಪತ್ರ ಬರೆದಿರುತ್ತಾರೆ. ಜಪ್ತಿಗೆ ಮೊದಲು ಪತ್ರ ವ್ಯವಹಾರ ನಡೆಸಿರುವುದಿಲ್ಲ.
5) ಕಡತವನ್ನು ದಿನಾಂಕ: 01–06–04 ರಂದೇ ಸೂಕ್ತ ಆದೇಶ ಕೋರಿ ಆಪಾದಿತರಿಗೆ ಮಂಡಿಸಲಾಗಿದ್ದರೂ ಸಹ ಇವರು ಇದನ್ನು ದಿನಾಂಕ: 13–08–04 ರಂದು ಯಾವುದೇ ಸಲಹೆ/ಸೂಚನೆ ದಾಖಲಿಸದೆ ಮಂಡಿಸಿರುವುದು ಸಂಬಂಧಿಸಿದ ಕಡತದಿಂದ ಕಂಡುಬರುತ್ತದೆ.
6) ಕಾಮಗಾರಿಗಳನ್ನು ತುಂಡು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಪುರಸಭೆಯ ನಿರ್ಣಯವನ್ನು ಆಪಾದಿತರು ಕಾಮಗಾರಿಗಳಿಗೆ ಟೆಂಡರ್ ಕರೆಯುವ ಬಗ್ಗೆ ಅನುಮೋದನೆ ನೀಡುವಂತೆ ಕೋರಿ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರಗಳಲ್ಲಿ ಪ್ರಸ್ತಾಪಿಸಿರುವುದಿಲ್ಲ. ಕಾಮಗಾರಿಗಳನ್ನು ಟೆಂಡರ್ ಮೂಲಕ ಕೈಗೊಳ್ಳುವುದೇ ಅಥವಾ ತುಂಡುಗುತ್ತಿಗೆ ಮೂಲಕ ಕೈಗೊಳ್ಳುವುದೇ ಎಂಬ ಬಗ್ಗೆ ಜಿಲ್ಲಾಧಿಕಾರಿಗಳಿಂದ ಪೂರ್ವಾನುಮೋದನೆ ಪಡೆದಿರುವುದಿಲ್ಲ.
7) ದರಕಾಸ್ತು ಜಮೀನಿಗೆ ಸಂಬಂಧಿಸಿದಂತೆ ತಹಶೀಲ್ದಾರರಿಂದ ವರದಿ ಪಡೆಯುವಂತೆ ಜಿಲ್ಲಾಧಿಕಾರಿಗಳು ಕಡತದಲ್ಲಿ ನಮೂದಿಸಿದ್ದರೂ ಸಹ, ಇದೇ ಜಮೀನಿಗೆ ಸಂಬಂಧಿಸಿದ ಹಳೆಯ ಕಡತದಲ್ಲಿನ ಹಿಂದಿನ ಜಿಲ್ಲಾಧಿಕಾರಿಗಳು ಅಭಿಪ್ರಾಯವನ್ನು ಉಲ್ಲೇಖಿಸಿ ಆಪಾದಿತರು ಹಿಡುವಳಿ ಜಮೀನೆಂದು ಗಣಿ ಮತ್ತು ಭೂ ವಿಜ್ಞಾನ ಇಲಾಖೆಗೆ ಪತ್ರ ಬರೆದಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ನೀಡಲಾಗಿದ್ದ 2ನೇ ಕಾರಣ ಕೇಳುವ ನೋಟೀಸಿಗೆ ಶ್ರೀ ಎನ್ ಎಂ. ನೀಲಕಂಠ ರವರು ಸಲ್ಲಿಸಿದ ಲಿಖಿತ ಅಹವಾಲಿನಲ್ಲಿ ತಮ್ಮ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ನಿರಾಕರಿಸಿರುತ್ತಾರೆ. ಇವರ ಲಿಖಿತ ಅಹವಾಲಿನ ಸಂಕ್ಷಿಪ್ತ ರೂಪವು ಈ ಕೆಳಕಂಡಂತೆ ಇರುತ್ತದೆ.

1) ಬಾಕಿ ಇಟ್ಟಿರುವರೆಂದು ತಿಳಿಸಲಾದ 35 ಕಡತಗಳನ್ನು ವಿಚಾರಣೆಯಲ್ಲಿ ಹಾಜರುಪಡಿಸಿರುವುದಿಲ್ಲ. ಪತ್ರಾಂಕಿತ ಅಧಿಕಾರಿ ವರ್ಗಾವಣೆಗೊಂಡಾಗ ಅವರ ಬಳಿ ಇರುವ ಕಡತಗಳನ್ನು ಪಟ್ಟಿ ಮಾಡಿ ವಹಿಸಿಕೊಡುವ ಕಾರ್ಯವಿಧಾನ ಇರುವುದಿಲ್ಲ. ಯಾವ ಕಡತಗಳು ತುರ್ತು ನಿರ್ವಹಣೆಯಾಗಬೇಕು ಎಂಬ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ ಇತ್ಯಾದಿಗಳು.
2) ಜಿಲ್ಲಾಧಿಕಾರಿಗಳಿಂದ ಟಿಪ್ಪಣಿ ಅನುಮೋದನೆಗೊಂಡ ನಂತರ, ಆದೇಶಕ್ಕೆ ಊಕಿಂ ಸಹಿ ಮಾಡಬಹುದು. ಈ ಬಗ್ಗೆ ಹಲವಾರು ನಿದರ್ಶನಗಳಿವೆ.
3) ಭೂ ನ್ಯಾಯಮಂಡಳಿಯಲ್ಲಿ ಆದೇಶವಾಗಿರುವ ಕೆಲವು ಪ್ರಕರಣಗಳಲ್ಲಿ ನಾಮನಿರ್ದೇಶಿತ ಸದಸ್ಯರು ಸಹಿ ಮಾಡಿರುತ್ತಾರೆಂದು ತಹಶೀಲ್ದಾರರು ಸಾಕ್ಷಿ ನುಡಿದಿರುತ್ತಾರೆ.
4) ನ್ಯಾಯಾಲಯದ ಜಪ್ತಿ ಆದೇಶಕ್ಕೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡುವಂತೆ ಏಓಓಐ ಗೆ ಪತ್ರ ಬರೆಯಲಾಗಿದೆ. ವಿಚಾರಣಾಧಿಕಾರಿಗಳು ಸಾಕ್ಷೀದಾರರ ಹೇಳಿಕೆಯನ್ನು ಪರಿಗಣಿಸಿರುವುದಿಲ್ಲ.
5) ಜೀತ ಪದ್ಧತಿ ಸಮೀಕ್ಷೆಗೆ ಸಂಬಂಧಿಸಿದಂತೆ, ವಿಚಾರಣಾಧಿಕಾರಿಗಳು ಕಡತವನ್ನು ಪಡೆದು ನಿಶಾನೆಯನ್ನಾಗಿ ಗುರುತಿಸದೇ, ಕಡತದಲ್ಲಿನ ಅಂಶಗಳನ್ನು ಪರಿಶೀಲಿಸಿರುವುದಾಗಿ ಸಾಕ್ಷಿದಾರರಂತೆ ಅಭಿಪ್ರಾಯವನ್ನು ದಾಖಲಿಸಿಕೊಂಡಿರುತ್ತಾರೆ.
6) ನಗರಸಭೆಯ ತುಂಡು ಗುತ್ತಿಗೆ ಕಾಮಗಾರಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಮಾರ್ಗಸೂಚಿ ಇಲ್ಲವೆಂದು, ಇದನ್ನು ಕೈಗೊಳ್ಳಲು ಸಾಮಾನ್ಯ ಸಭೆಯಲ್ಲಿ ನಿರ್ಣಯ ಆಗಿರುತ್ತದೆ. ಜಿಲ್ಲಾಧಿಕಾರಿಗಳ ಅನುಮೋದನೆ ಪಡೆಯಬೇಕೆಂಬ ಸುತ್ತೋಲೆಯು ಪೂರ್ವಾನ್ವಯವಾಗಿ ಅನ್ವಯಿಸುವುದಿಲ್ಲ.
7) ಜ್ಯೋತಿಗೌಡನಪುರ ಜಮೀನಿಗೆ ಸಂಬಂಧಿಸಿದಂತೆ, ಪತ್ರವ್ಯವಹಾರ ನಡೆಸಲು ಜಿಲ್ಲಾಧಿಕಾರಿಗಳ ಸೂಚನಾದೇಶ ಪಡೆಯಬೇಕೆಂಬುದು ಒಪ್ಪತಕ್ಕದಲ್ಲ, ಇತ್ಯಾದಿಗಳು.

ವಿಚಾರಣಾಧಿಕಾರಿಗಳ ವರದಿಯೊಂದಿಗೆ ಮೇಲಿನ ಅಂಶಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ, ಆಪಾದಿತರ ಅಹವಾಲು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 069 ಕೆಇವಿ 07 ಬೆಂಗಳೂರು, ದಿನಾಂಕ: 21–12–2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 8 (೩ಅ–ಜಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್ ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ (ಹಾಲಿ ವಿಶೇಷ ಭೂ ಸ್ವಾಧೀನಾಧಿಕಾರಿ,

ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರಿಗೆ, ಇವರ ವೇತನವನ್ನು ಕಾಲಿಕ ವೇತನ ಶ್ರೇಣಿಯಲ್ಲಿ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು, 2 ಹಂತ ಕೆಳಗೆ ಇಳಿಸುವ ದಂಡನೆ ವಿಧಿಸಲಾಗಿದೆ.

1. ಈ ದಂಡನೆಯು ತಕ್ಷಣದಿಂದ ಜಾರಿಗೆ ಬರುತ್ತದೆ.
2. ಈ ಅವಧಿಯಲ್ಲಿ ಇವರ ವೇತನವು ಸ್ಥಿರವಾಗಿರುತ್ತದೆ.
3. ಈ ದಂಡನೆಯು ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಹೊಂದಿರುತ್ತದೆ.
4. ಈ ದಂಡನೆಯ ಪರಿಣಾಮವಾಗಿ, ಇವರ ವೇತನವನ್ನು ರೂ. 15200–25650 ರ ವೇತನಶ್ರೇಣಿಯಲ್ಲಿ ತಕ್ಷಣದಿಂದ ರೂ. 25050–00 ಗಳಿಂದ ರೂ. 23850–00 ಗಳಿಗೆ ಇಳಿಸಲಾಗಿದೆ.
5. ಈ ದಂಡನೆಯ ಪರಿಣಾಮವಾಗಿ, ಇವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳು, ಅಂದರೆ ದಿನಾಂಕ: 01–02–2011 ಮತ್ತು 01–02–2012 ರ ವಾರ್ಷಿಕ ವೇತನ ಬಡ್ತಿಗಳು ಮುಂದೂಡಲ್ಪಡುತ್ತದೆ.
6. ಈ ದಂಡನೆಯ ಪರಿಣಾಮವಾಗಿ ದಿನಾಂಕ: 01–02–2013 ರಂದು ಇವರ ವೇತನವು ರೂ. 24450–00 ಕ್ಕೆ ಸ್ಥಾಪಿತವಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 56 ಸಿಆಸುಇ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯ ವಿಕಾಸಸೌಧ ಗ್ರಂಥಾಲಯದ ಉಪ ಮುಖ್ಯ ಗ್ರಂಥಾಧಿಕಾರಿ ಹುದ್ದೆಯನ್ನು ಮುಖ್ಯ ಗ್ರಂಥಾಧಿಕಾರಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 324 ಸಆಸೇ 95, ದಿನಾಂಕ: 7–5–1996.
**2.** ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯದ ಪತ್ರಾಂಕಿತ ಅಧಿಕಾರಿಗಳ ಸಂಘದ ಮನವಿ ದಿನಾಂಕ : 28–9–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಹುಮಹಡಿ ಕಟ್ಟಡದಲ್ಲಿ ಹೊಸದಾಗಿ ಪ್ರಾರಂಭಿಸಲಾದ ಗ್ರಂಥಾಲಯದ ಶಾಖೆಗೆ ಉಪ ಗ್ರಂಥಾಧಿಕಾರಿ ಹುದ್ದೆ ಸೇರಿದಂತೆ 4 ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಕರ್ನಾಟಕ ಸರ್ಕಾರ ಸಚಿವಾಲಯದ ಪತ್ರಾಂಕಿತ ಅಧಿಕಾರಿಗಳ ಸಂಘದ ಮನವಿಯಲ್ಲಿ ಸಚಿವಾಲಯದ ಗ್ರಂಥಾಲಯವು ವಿಧಾನಸೌಧ ಮತ್ತು ವಿಕಾಸ ಸೌಧಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸುಮಾರು 4000.00 ಸದಸ್ಯರುಗಳನ್ನು ಹೊಂದಿದ್ದು ಹಾಗೂ 1 ಲಕ್ಷಕ್ಕೂ ಹೆಚ್ಚು ಗ್ರಂಥಗಳ ಸಂಗ್ರಹ ಹೊಂದಿದೆಯೆಂದು ಐಎಎಸ್/ಕೆಎಎಸ್ ಅಧಿಕಾರಿಗಳು ಸೇರಿದಂತೆ ಸಚಿವಾಲಯದ ಎಲ್ಲಾ ಅಧಿಕಾರಿ/ನೌಕರರುಗಳು ಗ್ರಂಥಾಲಯದ ಉಪಯೋಗವನ್ನು ಪಡೆಯುತ್ತಿದ್ದಾರೆಂದು ಹಾಗೂ ಸಚಿವಾಲಯದ ಕೆಲವೇ ಇಲಾಖೆಗಳು ವಿಧಾನಸೌಧ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಇನ್ನುಳಿದ ಎಲ್ಲಾ ಇಲಾಖೆಗಳು ವಿಕಾಸಸೌಧ ಮತ್ತು ಬಹುಮಹಡಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರು ವಿಕಾಸಸೌಧ ಗ್ರಂಥಾಲಯ ಶಾಖೆಯನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆಂದು, ಆದ್ದರಿಂದ ಈ ಗ್ರಂಥಾಲಯದ ನಿರ್ವಹಣೆಯನ್ನು ಉಪ ಮುಖ್ಯ ಗ್ರಂಥಾಧಿಕಾರಿಯವರೇ ನಿರ್ವಹಿಸುತ್ತಿದ್ದು, ಗ್ರಂಥಾಲಯದ ಕಾರ್ಯವ್ಯಾಪ್ತಿ ಹಾಗೂ ಜವಾಬ್ದಾರಿಯಲ್ಲಿ ಸಾಕಷ್ಟು ಬದಲಾವಣೆಯಾಗಿರುವುದರಿಂದ ಆಡಳಿತಾತ್ಮಕ ದೃಷ್ಠಿಯಿಂದ ಸಚಿವಾಲಯದ ಗ್ರಂಥಾಲಯದ ವಿಕಾಸಸೌಧ ಶಾಖೆಯ ಉಪ ಮುಖ್ಯ ಗ್ರಂಥಾಧಿಕಾರಿ ಹುದ್ದೆಯನ್ನು ಮುಖ್ಯ ಗ್ರಂಥಾಧಿಕಾರಿ ಹುದ್ದೆಗೆ ಉನ್ನತೀಕರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 530 ಸಅಸೇ 2010, ಬೆಂಗಳೂರು, ದಿನಾಂಕ : 15ನೇ ಡಿಸೆಂಬರ್ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯ, ವಿಕಾಸಸೌಧ ಶಾಖೆಯಲ್ಲಿನ ಉಪ ಮುಖ್ಯ ಗ್ರಂಥಾಧಿಕಾರಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ವೇತನ ಶ್ರೇಣಿ ರೂ. 14,050–25050ರ ಮುಖ್ಯ ಗ್ರಂಥಾಧಿಕಾರಿ ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 901 ವೆಚ್ಚ 12/2010, ದಿನಾಂಕ : 15–11–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ. ಆರ್. 57 ಸಿ.ಆ.ಸು. ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಯುತ್ತಿರುವ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 470 ಎಸ್‌ಜಿಓ 82, ದಿನಾಂಕ : 1–9–82.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 033 ಸಸಿವಿ 96, ದಿನಾಂಕ : 24–2–98.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ಸಸಿವಿ 99, ದಿನಾಂಕ : 23–4–2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 01, ದಿನಾಂಕ : 19–11–2001.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 05, ದಿನಾಂಕ : 13–1–2006.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 06, ದಿನಾಂಕ : 18–1–2007.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 033 ಸಅಸೇ 08, ದಿನಾಂಕ : 11–6–2008.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 09, ದಿನಾಂಕ : 15–9–2009.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 631 ಸಅಸೇ 09, ದಿನಾಂಕ : 31–12–2009.
10. ಅನಧಿಕೃತ ಟಿಪ್ಪಣಿ ಸಂಖ್ಯೆ : ಜಸಂಇ 127 ಎಂಎಂಕೆ 2010, ದಿನಾಂಕ : 9–11–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ತಾಂತ್ರಿಕ ಸಿಬ್ಬಂದಿ ವೃಂದದ ಈ 21 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ (2) ರಿಂದ (9) ರವರೆಗೆ ಓದಲಾದ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಸದರಿ ಹುದ್ದೆಗಳಲ್ಲಿ ವಿಶ್ವಬ್ಯಾಂಕ್ ಶಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಆದೇಶದಲ್ಲಿ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ಹೊಸದಾಗಿ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿನ ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 1–1–2011 ರಿಂದ ಮುಂದುವರಿಸುವಂತೆ ಜಲಸಂಪನ್ಮೂಲ ಇಲಾಖೆಯು ಕೋರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 583 ಸಅಸೇ 2010, ಬೆಂಗಳೂರು, ದಿನಾಂಕ : 15–12–2010**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಈ ಕೆಳಕಂಡ ತಾಂತ್ರಿಕ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ : 1–1–2011 ರಿಂದ 31–12–2011 ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಉಪ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 01 ಹುದ್ದೆ |
| | ಶೀಘ್ರಲಿಪಿಗಾರ | 01 ಹುದ್ದೆ |
| | ಕಿರಿಯ ಸಹಾಯಕ | 01 ಹುದ್ದೆ |
| | ದಲಾಯತ್ | 01 ಹುದ್ದೆ |
| | ಒಟ್ಟು | 04 ಹುದ್ದೆಗಳು |
| **2.** | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3** | |
| | ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 01 |
| | ಶಾಖಾಧಿಕಾರಿ | 01 |
| | ಹಿರಿಯ ಸಹಾಯಕರು | 02 |
| | ಸಹಾಯಕರು | 01 |
| | ಶೀಘ್ರಲಿಪಿಗಾರ | 01 |
| | ಕಿರಿಯ ಸಹಾಯಕ | 01 |
| | ಬೆರಳಚ್ಚುಗಾರ | 01 |
| | ದಲಾಯತ್ | 01 |
| | ಒಟ್ಟು | 09 |
| 3. | ಶಾಖಾಧಿಕಾರಿ | 01 |

| | | |
|---|---|---|
| | ಹಿರಿಯ ಸಹಾಯಕ | 01 |
| | ಸಹಾಯಕ | 01 |
| | ಶೀಘ್ರಲಿಪಿಗಾರ | 01 |
| | ಕಿರಿಯ ಸಹಾಯಕ | 01 |
| | ಬೆರಳಚ್ಚುಗಾರ | 01 |
| | ದಲಾಯತ್ | 01 |
| | ಒಟ್ಟು | 07 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 58 ಸಿ.ಆ.ಸು. ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ–ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್ : ಐಎನ್‌ವಿ(ಜಿ) : ಸಿಟಿ : ಕ್ರೈಂ 56 : 2010, ದಿನಾಂಕ : 1–12–2010.

**ಪ್ರಸ್ತಾವನೆ :**

ಶ್ರೀ ಸಿ. ನಾರಾಯಣಸ್ವಾಮಿ, ಬಂಗ್ಲಾಪೇಟೆ ಬೊಮ್ಮಸಂದ್ರ ಇವರು ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 23/1 ರಲ್ಲಿ 3–10 ಎಕರೆ ಮತ್ತು 1 ಗುಂಟೆ ಕರಾಬು ಒಟ್ಟು 3–11 ಎಕರೆ ಸರ್ವೆ ನಂ : 23/2 ರಲ್ಲಿ 1–10 ಎಕರೆ ಮತ್ತು ಸರ್ವೆ ನಂ. 26 ರಲ್ಲಿ 0.33 ಗುಂಟೆ ಒಟ್ಟು 5 ಎಕರೆ 14 ಗುಂಟೆ ಜಮೀನುಗಳನ್ನು 2006 ರಲ್ಲಿ ಸ್ವಯಾರ್ಜಿತವಾಗಿ ಖರೀದಿಸಿದ್ದು ಸದರಿ ಜಮೀನುಗಳು ಕೈಗಾರಿಕಾ ವಲಯ ವ್ಯಾಪ್ತಿಗೊಳಪಟ್ಟಿದ್ದು ಇವುಗಳು ಕೈಗಾರಿಕಾ ಉದ್ದೇಶಕ್ಕಾಗಿ ಭೂ ಪರಿವರ್ತನೆ ಮಾಡಲು ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ರೂ. 2.00 ಲಕ್ಷದ ಲಂಚದ ಹಣವನ್ನು ಡಿ.ಡಿ. ರೂಪದಲ್ಲಿ ನೀಡುವಂತೆ ಒತ್ತಾಯ ಮಾಡುತ್ತಿದ್ದಾರೆಂಬ ಬಗ್ಗೆ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಗೆ ನೀಡಿದ ದೂರಿನ ಮೇರೆಗೆ, ಲೋಕಾಯುಕ್ತ ಪೊಲೀಸರು ಭ್ರಷ್ಟಾಚಾರ ವಿರೋಧ ಕಾಯ್ದೆ 1988 ಕಲಂ–7,13(1)(ಡಿ) ಸಹವಾಚನ ಕಲಂ 13(2) ಹಾಗೂ 120(ಬಿ) ರಡಿಯ ಪ್ರಕಾರ ದಿನಾಂಕ : 29–11–2010ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂ : 56/2010ರಲ್ಲಿ ಪ್ರಕರಣ ದಾಖಲಿಸಿಕೊಂಡಿದ್ದು, ತನಿಖಾಧಿಕಾರಿಗಳು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿನಾಂಕ : 29–11–2010 ರಂದು ಲಂಚದ ಬಲೆ ಕಾರ್ಯಾಚರಣೆ ನಡೆಸಿರುವುದನ್ನು ಮೇಲೆ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ದಿನಾಂಕ : 1–12–2010ರಲ್ಲಿ ವರದಿ ಮಾಡಿದ್ದಾರೆ. ಸದರಿ ವರದಿಯ ಪ್ರಕಾರ :

ದಿನಾಂಕ : 14–11–2010ರಂದು ಫಿರ್ಯಾದುದಾರರು ವಿಶೇಷ ಜಿಲ್ಲಾಧಿಕಾರಿಯಾದ ಶ್ರೀ ರಾಮಾಂಜನೇಯ ರವರನ್ನು ಭೇಟಿ ಮಾಡಿ, ಜಮೀನುಗಳ ಭೂ ಪರಿವರ್ತನೆ ಕುರಿತು ವಿಚಾರಿಸಿದಾಗ, ಅವರು ಕೆಲಸ ಮಾಡಿಕೊಡುವುದಾಗಿ ಹೇಳಿ ಅವರ ಕೊಠಡಿಯಲ್ಲೆ ಇದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಅವರ ಕಡೆಯವರ ಒಂದು ಮದುವೆ ಇದೆ. ಅದಕ್ಕಾಗಿ ನೀವು ರೂ. 2.00 ಲಕ್ಷಗಳ ಡಿ.ಡಿ.ಯನ್ನು ನೀಡುವಂತೆ ತಿಳಿಸಿರುತ್ತಾರೆ. ಫಿರ್ಯಾದುದಾರರು ಸದರಿ ವ್ಯಕ್ತಿಯನ್ನು ಈ ಕುರಿತು ವಿಚಾರಿಸಿದಾಗ ಅವರು ಡಿ.ಡಿ.ಯನ್ನು ಕೊಟ್ಟರೆ ಮಾತ್ರ ಕೆಲಸ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ. ದಿನಾಂಕ : 27–11–2010 ರಂದು ಫಿರ್ಯಾದುದಾರರು ಆರೋಪಿ–1 ರವರನ್ನು ಭೇಟಿ ಮಾಡಿ, ತಮ್ಮ ಕೆಲಸದ ಬಗ್ಗೆ ವಿಚಾರಿಸಿದಾಗ ಆರೋಪಿತರು ಅವರ ಕೆಲಸ ಮಾಡಿಕೊಡುವುದಾಗಿ ಹೇಳಿ ಅವರ ಕೊಠಡಿಯಲ್ಲಿದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಅವರಿಗೆ ಸ್ವಲ್ಪ ದುಡ್ಡು ಕೊಡಲು ತಿಳಿಸಿದ್ದು ಫಿರ್ಯಾದುದಾರರು ರೂ. 50 ಸಾವಿರಗಳನ್ನು ಕೊಡುವುದಾಗಿ ಒಪ್ಪಿದಾಗ ಆರೋಪಿ–1 ರವರು ಫಿರ್ಯಾದುದಾರರ ಕೆಲಸ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ. ಈ ಎಲ್ಲಾ ವಿದ್ಯಮಾನಗಳನ್ನು ಫಿರ್ಯಾದುದಾರರು ಬಟನ್ ಕ್ಯಾಮರಾದಲ್ಲಿ ಚಿತ್ರೀಕರಣ ಮಾಡಿಕೊಂಡಿದ್ದು ಸಂಭಾಷಣೆಯನ್ನು ಡಿಜಿಟಲ್ ವಾಯ್ಸ್ ರೆಕಾರ್ಡರ್‌ನಲ್ಲಿ ರೆಕಾರ್ಡ್ ಮಾಡಿಕೊಡಿರುತ್ತಾರೆ.

ಫಿರ್ಯಾದುದಾರರಿಗೆ ಆರೋಪಿತರು ಕೇಳಿದಂತೆ ಲಂಚದ ಹಣವನ್ನು ನೀಡಲು ಇಚ್ಛೆ ಇಲ್ಲದ ಕಾರಣ ಆರೋಪಿ ಶ್ರೀ ರಾಮಾಂಜನೇಯ ವಿಶೇಷ ಜಿಲ್ಲಾಧಿಕಾರಿ ಬೆಂಗಳೂರು ಜಿಲ್ಲೆ ರವರ ವಿರುದ್ದ ಕಾನೂನು ರೀತ್ಯ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ದೂರಿನ ಹಿನ್ನೆಲೆಯಲ್ಲಿ ಶ್ರೀ ಕೆ. ರವಿಶಂಕರ್, ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರರವರು ಶ್ರೀ ರಾಮಾಂಜನೇಯ ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ರವರ ವಿರುದ್ದ ಲಂಚ ನಿರೋಧ ಕಾಯ್ದೆ 1988 ರ

ಕಲಂ 7 13(1)ಡಿ ಸಹವಾಚನ ಕಲಂ 13(2)ರ ರೀತ್ಯ ದಿನಾಂಕ : 29–11–2010 ರಂದು ಮೊಕದ್ದಮೆ ಸಂ. 56/2010 ರಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಔಚಿತ್ಯ ಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ ತನಿಖಾಧಿಕಾರಿಯು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿನಾಂಕ : 29–11–2010 ರಂದು ಬೀಸಿದ ಲಂಚದ ಬಲೆಯು ಯಶಸ್ವಿಯಾಗಿರುತ್ತದೆ.

ಫಿರ್ಯಾದುದಾರರು ಸಾಕ್ಷಿಯೊಂದಿಗೆ ಆರೋಪಿ–1 ರವರನ್ನು ಅವರ ಕೊಠಡಿಯಲ್ಲಿ ಭೇಟಿ ಮಾಡಿದಾಗ ಅವರು ತಮ್ಮ ಕಛೇರಿಯಲ್ಲಿ ಕುಳಿತಿದ್ದ ಆರೋಪಿ–3 ಶ್ರೀ ನವೀನ್ ಎಂಬುವವರಿಗೆ ಅವರನ್ನು ಕೆರೆಯಿಸಿ ಎಂದು ತಿಳಿಸಿದ ಮೇರೆಗೆ, ಸದರಿಯವರು ತಮ್ಮ ಮೊಬೈಲ್‌ನಿಂದ ಯಾರಿಗೋ ಕರೆ ಮಾಡಿದಾಗ 5–6 ನಿಮಿಷಗಳಲ್ಲಿ ಅಲ್ಲಿಗೆ ವ್ಯಕ್ತಿಯೋರ್ವರು ಬಂದಿದ್ದು, ಸದರಿಯವರಿಗೆ ಆರೋಪಿ–1 ರವರು ಹಣ ಪಡೆದುಕೊಳ್ಳುವಂತೆ ಕೈ ಸಂಜ್ಞೆ ಮಾಡಿ ಫಿರ್ಯಾದುದಾರರನ್ನು ಕರೆದುಕೊಂಡು ಹೋಗುವಂತೆ ತೆಲುಗು ಭಾಷೆಯಲ್ಲಿ ತಿಳಿಸಿರುತ್ತಾರೆ. ಅದರಂತೆ ಆರೋಪಿ–4 ಶ್ರೀ ಗಂಗಪ್ಪ ಮತ್ತು ಆರೋಪಿ–3 ಶ್ರೀ ನವೀನ್‌ರವರುಗಳು ಫಿರ್ಯಾದುದಾರರನ್ನು ಸರ್ಕಾರಿ ಕಾಲೇಜಿನ ಮೈದಾನದ ನಿಲುಗಡೆ ಸ್ಥಳಕ್ಕೆ ಬಂದು ಮಾರುತಿ ಸ್ವಿಫ್ಟ್ ಕಾರು ಸಂ. ಕೆಎ–04–ಎಮ್‌ಜಿ–5475 ರಲ್ಲಿ ಕುಳಿತಿದ್ದ ಆರೋಪಿ–2 ಅವರು ಕಾರಿನಿಂದ ಹೊರಗೆ ಬಂದು ಡಿ.ಸಿ. ಕಛೇರಿಯ ಆವರಣದಲ್ಲಿ ಫಿರ್ಯಾದುದಾರರಿಂದ ಲಂಚದ ಹಣವನ್ನು ತಮ್ಮ ಬಲಗೈನಲ್ಲಿ ಪಡೆದು ಎಡಗೈನಿಂದ ತಾವು ಧರಿಸಿದ್ದ ಪ್ಯಾಂಟಿನ ಬಲಭಾಗದ ಜೇಬಿನಲ್ಲಿಟ್ಟುಕೊಂಡಿರುತ್ತಾರೆ. ನಂತರ ತನಿಖಾ ತಂಡದವರು ಆರೋಪಿ–2 ಶ್ರೀ ವೆಂಕಟೇಶ್ ಬಾಬು ಆರೋಪಿ–3 ಶ್ರೀ ನವೀನ್ ಮತ್ತು ಆರೋಪಿ–4 ಶ್ರೀ ಗಂಗಪ್ಪ ರವರುಗಳನ್ನು ಹಿಡಿದುಕೊಂಡಿರುತ್ತಾರೆ. ನಂತರ ತನಿಖಾಧಿಕಾರಿಗಳು ಆರೋಪಿ–2 ರವರು ಕುಳಿತಿದ್ದ ಕಾರನ್ನು ಶೋಧಿಸಿದಾಗ, ಕೆಲವು ದಾಖಲಾತಿಗಳು ಹಾಗೂ ಸದರಿ ಕಾರಿನ ಡ್ಯಾಷ್ ಬೋರ್ಡಿನಲ್ಲಿದ್ದ ರೂ. 45,420/– ಗಳು ದೊರೆತಿದ್ದು ಅವುಗಳನ್ನು ವಶಪಡಿಸಿಕೊಂಡಿರುತ್ತಾರೆ.

ಆರೋಪಿ–1 ರವರು ತಿಳಿಸಿದಂತೆ ಲಂಚದ ಹಣವನ್ನು ಪಡೆದ ಆರೋಪಿ–2 ಶ್ರೀ ವೆಂಕಟೇಶ್ ಬಾಬು ರವರ ಎರಡೂ ಕೈ ಬೆರಳುಗಳನ್ನು ಸೋಡಿಯಂ ಕಾರ್ಬನೇಟ್ ದ್ರಾವಣಗಳಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತವಾದ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಯಿಸಿರುತ್ತವೆ. ಆರೋಪಿ–1 ರವರ ಪರವಾಗಿ ಆರೋಪಿ–2 ರವರು ಫಿರ್ಯಾದುದಾರರಿಂದ ಪಡೆದ ಲಂಚದ ಹಣವನ್ನು ತಾವು ಧರಿಸಿದ್ದ ಪ್ಯಾಂಟಿನ ಎಡಭಾಗದ ಜೇಬಿನಲ್ಲಿಟ್ಟುಕೊಂಡು ಅದನ್ನು ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಆರೋಪಿ ಫಿರ್ಯಾದುದಾರರ ನಡುವೆ ನಡೆದಿರುವ ವಿದ್ಯಮಾನಗಳನ್ನು ನೆರಳು ಸಾಕ್ಷಿ ಹಾಗೂ ಸಾಂದರ್ಭಿಕ ಸಾಕ್ಷಿಗಳು ಗಮನಿಸಿದ್ದು, ಮಹಜರು ಸಮಯದಲ್ಲಿ ಹೇಳಿಕೆಯನ್ನು ನೀಡಿರುತ್ತಾರೆ. ಆರೋಪಿ–1 ಶ್ರೀ ರಾಮಾಂಜನೇಯ ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ, ಆರೋಪಿ–2 ಶ್ರೀ ವೆಂಕಟೇಶ್ ಬಾಬು ಆರೋಪಿ–3 ಶ್ರೀ ನವೀನ್ ಹಾಗೂ ಆರೋಪಿ–4 ಶ್ರೀ ಗಂಗಪ್ಪ (ಖಾಸಗಿ ವ್ಯಕ್ತಿಗಳು) ರವರುಗಳನ್ನು ದಿನಾಂಕ : 29–11–2010 ರಂದು ದಸ್ತಗಿರಿ ಮಾಡಿ, ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿದ್ದು. ನ್ಯಾಯಾಧೀಶರ ಆದೇಶದಂತೆ ಆರೋಪಿತರುಗಳನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದ್ದು. ಆರೋಪಿತರುಗಳು ಹಾಲಿ ನ್ಯಾಯಾಂಗ ಬಂಧನದಲ್ಲಿರುತ್ತಾರೆ.

ಈ ಪ್ರಕರಣದಲ್ಲಿ ಇಲ್ಲಿಯವರೆಗೆ ಆದ ತನಿಖೆಯ ವಿದ್ಯಮಾನಗಳನ್ನು ಈ ಕೆಳಕಂಡಂತೆ ಲೋಕಾಯುಕ್ತ ಪೊಲೀಸರು ವರದಿ ನೀಡಿರುವುದನ್ನು ಸಕ್ಷಮ ಪ್ರಾಧಿಕಾರವು ಕೂಲಂಕಷವಾಗಿ ಗಮನಿಸಿದೆ.

1. ಫಿರ್ಯಾದುದಾರರು ಆನೇಕಲ್ ತಾಲ್ಲೂಕು, ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 23/1,23/2 ಮತ್ತು 26 ಗಳಲ್ಲಿ 5–14 ಗುಂಟೆ ಜಮೀನುಗಳನ್ನು 2006 ರಲ್ಲಿ ಖರೀದಿಸಿದ್ದು ದಿನಾಂಕ : 25–10–2010 ರಂದು ಕೈಗಾರಿಕಾ ಉದ್ದೇಶದ ಸಂಬಂಧ ಭೂ ಪರಿವರ್ತನೆಗಾಗಿ ಆನೇಕಲ್ ತಹಸೀಲ್ದಾರ್ ರವರಿಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.
2. ದಿನಾಂಕ : 26–10–2010 ರಂದು ಆನೇಕಲ್ ತಾಲ್ಲೂಕು ಕಸಬಾ ಹೋಬಳಿಯ ಕಂದಾಯ ನಿರೀಕ್ಷಕರು ಭೂ ಪರಿವರ್ತನೆ ಕುರಿತಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಇದನ್ನು ಪರಿಶೀಲಿಸಿದ ತಹಸೀಲ್ದಾರ್ ರವರು ದಿನಾಂಕ : 29–10–2010 ರಂದು ಅದನ್ನು ವಿಶೇಷ ಜಿಲ್ಲಾಧಿಕಾರಿಗಳ ಕಛೇರಿಗೆ ಕಳುಹಿಸಿರುತ್ತಾರೆ.
3. ದಿನಾಂಕ : 14–11–2010 ರಂದು ಫಿರ್ಯಾದುದಾರರು ತಮ್ಮ ಅರ್ಜಿಯ ಕುರಿತು ವಿಶೇಷ ಜಿಲ್ಲಾಧಿಕಾರಿ ರವರನ್ನು ಭೇಟಿ ಮಾಡಿ ಜಮೀನುಗಳ ಭೂ ಪರಿವರ್ತನೆ ಸಂಬಂಧ ವಿಚಾರಿಸಿದಾಗ ಸದರಿಯವರು ಕೆಲಸ ಮಾಡಿಸಿಕೊಡುವುದಾಗಿ ತಿಳಿಸಿ ಅವರ ಕೊಠಡಿಯಲ್ಲಿ ಕುಳಿತಿದ್ದ ವ್ಯಕ್ತಿಗೆ ರೂ. 2.00 ಲಕ್ಷಗಳ ಡಿ.ಡಿ.ಯನ್ನು ನೀಡಲು ಒತ್ತಾಯಿಸಿರುತ್ತಾರೆ.
4. ದಿನಾಂಕ : 18–11–2010 ರಂದು ಫಿರ್ಯಾದುದಾರರು ಆರೋಪಿತ ಅಧಿಕಾರಿರವರನ್ನು ಭೇಟಿ ಮಾಡಿದಾಗ ಅವರು ತಮ್ಮ ಕೊಠಡಿಯಲ್ಲಿದ್ದ ವ್ಯಕ್ತಿಗೆ ರೂ. 15,000/–ಗಳನ್ನು ನೀಡುವಂತೆ ತಿಳಿಸಿದ್ದು, ಫಿರ್ಯಾದುದಾರರು ಎಸ್.ಬಿ.ಎಂ. ಬ್ಯಾಂಕ್ ನಗರ ಸಿವಿಲ್ ನ್ಯಾಯಾಲಯ ಸಂಕೀರ್ಣದ ಎ.ಟಿ.ಎಂ. ನಲ್ಲಿ ಹಣವನ್ನು ತೆಗೆದು ಸದರಿ ವ್ಯಕ್ತಿಗೆ ತಮ್ಮ ಸ್ನೇಹಿತ ಶ್ರೀ ಭದ್ರಾರೆಡ್ಡಿ ಸಮಕ್ಷಮ ನೀಡಿರುತ್ತಾರೆ.
5. ದಿನಾಂಕ : 25–11–2010 ರಂದು ಫಿರ್ಯಾದುದಾರರು ವಿಶೇಷ ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡಿ ಭೂ ಪರಿವರ್ತನಾ ಶುಲ್ಕವನ್ನು ಪಾವತಿಸಿರುವ ಬಗ್ಗೆ ತಿಳಿಸಿದಾಗ ಆರೋಪಿತ ಅಧಿಕಾರಿ ಪುನಃ ರೂ. 2.00 ಲಕ್ಷಗಳ ಡಿ.ಡಿ. ನೀಡುವಂತೆ ಒತ್ತಾಯಿಸಿದಾಗ ಫಿರ್ಯಾದುದಾರರು ತಾವು ರೈತನಾಗಿದ್ದು ರಿಯಲ್ ಎಸ್ಟೇಟ್ ವ್ಯವಹಾರ ಮಾಡುತ್ತಿರುವುದಿಲ್ಲ ಹಾಗೂ ತಮ್ಮ ಬಳಿ ಅಷ್ಟು ಹಣವಿಲ್ಲವೆಂದು ತಿಳಿಸಲಾಗಿ ಸದರಿಯವರನ್ನು ಫಿರ್ಯಾದುದಾರರ ಕಡತವನ್ನು ತಿರಸ್ಕರಿಸುವುದಾಗಿ ಹೇಳಿ ತಮ್ಮ ಆಪ್ತ ಸಹಾಯಕರಿಗೆ ಕಡತಗಳನ್ನು ಹಿಂತಿರುಗಿಸಿ ವೈಯಕ್ತಿಕವಾಗಿ ನಿಂದನೆ ಮಾಡಿರುತ್ತಾರೆ.
6. ದಿನಾಂಕ : 27–11–2010 ರ ಸಂಜೆ ಫಿರ್ಯಾದುದಾರರು ಆಪಾದಿತ ಅಧಿಕಾರಿ ರವರನ್ನು ಪುನಃ ಭೇಟಿ ಮಾಡಿದಾಗ ಅವರು ತಮ್ಮ ಕೊಠಡಿಯಲ್ಲಿದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಅವರಿಗೆ ಸ್ವಲ್ಪ ದುಡ್ಡು ಕೊಡುವಂತೆ ಒತ್ತಾಯಿಸಿದ್ದು ಫಿರ್ಯಾದುದಾರರು ಎಷ್ಟು ಎಂದು ಕೇಳಿದಾಗ ಆಪಾದಿತ ಅಧಿಕಾರಿ ರವರು ರೂ. 1.00 ಲಕ್ಷಗಳನ್ನು ಕೊಡಲು ತಿಳಿಸಿದಾಗ ಫಿರ್ಯಾದುದಾರರು ರೂ. 50,000/–ಗಳಿಗೆ

ಒಪ್ಪಿದಾಗ ಆರೋಪಿತರು ಫಿರ್ಯಾದುದಾರರ ಕೆಲಸ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ. ಈ ಎಲ್ಲಾ ವಿದ್ಯಮಾನಗಳನ್ನು ಫಿರ್ಯಾದುದಾರರು ಬಟನ್ ಕ್ಯಾಮರಾದಲ್ಲಿ ರೆಕಾರ್ಡಿಂಗ್ ಮಾಡಿರುತ್ತಾರೆ.

7. ದಿನಾಂಕ : 29–11–2010 ರಂದು ಫಿರ್ಯಾದುದಾರರು ಪಂಚ ಸಾಕ್ಷಿಯೊಂದಿಗೆ ಆರೋಪಿತ ಅಧಿಕಾರಿರವರನ್ನು ಭೇಟಿ ಮಾಡಿದಾಗ ಆರೋಪಿತರು ತಮ್ಮ ಕಛೇರಿಯಲ್ಲಿದ್ದು ಫಿರ್ಯಾದುದಾರರ ಕುರಿತು ಆರೋಪಿತರ ಸಹಾಯಕರುಗಳಾದ ಶ್ರೀ ಗಂಗಪ್ಪ, ಶ್ರೀ ನವೀನ್ ಹಾಗೂ ಶ್ರೀ ವೆಂಕಟೇಶ್ ಬಾಬು ರವರಿಗೆ ತಿಳಿಸುತ್ತಾ ದುಡ್ಡು ತೆಗೆದುಕೊಳ್ಳಲು ಸಂಜ್ಞೆ ಮಾಡಿ ಫಿರ್ಯಾದುದಾರರನ್ನು ಕರೆದುಕೊಂಡು ಹೋಗುವಂತೆ ತೆಲುಗು ಭಾಷೆಯಲ್ಲಿ ಆರೋಪಿತರು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. ರವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಅಮಾನತ್ತಿನಲ್ಲಿಡಲು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಶಿಫಾರಸ್ಸು ಮಾಡಿರುತ್ತಾರೆ.

ಮುಂದುವರೆದು, ಕರ್ನಾಟಕ ಲೋಕಾಯುಕ್ತದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಅದಕ್ಕೆ ಪೂರಕವಾಗಿ ಸಲ್ಲಿಸಿರುವ ಸಾಕ್ಷ್ಯಾಧಾರಗಳು, ಪ್ರಥಮ ವರ್ತಮಾನ ವರದಿ, ಪಂಚರ ಸಾಕ್ಷಿ, ಪ್ರಾಯೋಗಿಕ ಪಂಚನಾಮೆ, ಸಿ.ಡಿ. ಇತ್ಯಾದಿಗಳನ್ನು ಸಕ್ಷಮ ಪ್ರಾಧಿಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಶ್ರೀ ಎಚ್. ರಾಮಾಂಜನೇಯ ಕೆ.ಎ.ಎಸ್. ರವರು 48 ಗಂಟೆಗಳಿಗೂ ಮೀರಿ ಹೆಚ್ಚಿನ ಅವಧಿಗೆ ನ್ಯಾಯಾಂಗ ಬಂಧನದಲ್ಲಿರುವುದಿಂದಲೂ ಇವರು ಲಂಚದ ಹಣಕ್ಕಾಗಿ ಫಿರ್ಯಾದುದಾರರನ್ನು ಒತ್ತಾಯಿಸಿರುವುದು ಮತ್ತು ಅದನ್ನು ಇತರೆಯವರ ಮೂಲಕ ಪಡೆಯುವಲ್ಲಿನ ಕೃತ್ಯವು ಮೇಲಿನ ವಿವರಗಳಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ಮನವರಿಕೆಯಾಗಿರುವುದರಿಂದಲೂ, ಪ್ರಕರಣದ ಸುಗಮ ತನಿಖೆಯ ಹಿತದೃಷ್ಟಿಯಿಂದ ಹಾಗೂ ಪ್ರಕರಣದ ಸಾಕ್ಷ್ಯಾಧಾರಗಳನ್ನು ತಿರುಚುವ/ನಾಶಪಡಿಸುವ ಸಂಭವವನ್ನು ತಪ್ಪಿಸುವ ದೃಷ್ಟಿಯಿಂದ ಇವರನ್ನು ಸೇವೆಯಲ್ಲಿ ಮುಂದುವರಿಸುವುದು ಸಮಂಜಸವಲ್ಲವೆಂದು ನಿರ್ಣಯಿಸಿ ಸರ್ಕಾರವು ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್, ಅಧಿಕಾರಿ ಅವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 58 ಕೆಇವಿ 2010, ಬೆಂಗಳೂರು, ದಿನಾಂಕ : 9ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಗಳನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10(2)(ಎ) ಮತ್ತು ನಿಯಮ 10(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98 ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 59 ಸಿಆಸು ಇಲಾಖೆ (ಸೇವೆಗಳು–2).

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ತಿದ್ದುಪಡಿ ಆದೇಶ

ಸಂಖ್ಯೆ: ಸಿಐ/408/ಎಸ್‌ಪಿಐ/2010, ಬೆಂಗಳೂರು, ದಿನಾಂಕ 2ನೇ ಡಿಸೆಂಬರ್ 2010

**ವಿಷಯ** : ಪ್ರೋತ್ಸಾಹ/ರಿಯಾಯಿತಿ ಉಪಯೋಗಿಸದೆ ಇರುವ ಕಂಪನಿಗೆ ಹೆಚ್ಚಿನ ಸಮಯಾವಕಾಶ ನೀಡುವ ಕುರಿತು.

***

ಸರ್ಕಾರದ ಆದೇಶ ಸಂಖ್ಯೆ: ಸಿಐ 408 ಎಸ್‌ಪಿಐ 2010, ದಿನಾಂಕ 01–12–2010ರಂದು ಹೊರಡಿಸಿರುವ ಆದೇಶದ ಭಾಗದಲ್ಲಿ ಕ್ರಮ ಸಂಖ್ಯೆ: 1ರ 2ನೇ ವಾಕ್ಯದಲ್ಲಿ **"ರೂ. 250 ಕ್ಕಿಂತ"** ಬದಲಾಗಿ **"ರೂ. 250 ಕೋಟಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ)

ಪಿ.ಆರ್. ನಂ. 60 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## URBAN DEVELOPMENT SECRETARIAT

**Sub :-** Extension of the services of contract period of Sri R. Revanna and Smt. P. Ananthalakshmi, Transport Planners in Directorate of Urban Land Transport, for one year from 24-11-2009 and 25-11-2009 respectively.

**Ref :-** (1) Government Order No. UDD 134 BMR 2006, Dated 08-03-2007

(2) Government Order No. UDD 134 BMR 2006, Dated 09-03-2007

(3) Government Order No. UDD 4 CAR 2008, Dated 23-07-2008

(4) Government Order No. UDD 4 CAR 2009, Dated 16-05-2009

(5) Approval from Principal Secretary, UDD, on file No.: DULT/155/ADM/2008, Dated 23-11-2009.

(6) Approval from Principal Secretary, UDD, on file No.: DULT/189/ADM/2009-10. Dated 23-11-2009.

(7) Government Order No. UDD 398 BMR 2008, Bangalore, Dated 08-01-2010.

***

**Preamble:-**

As per the recommendation of the National Working Group on Urban Transport for the 11th Plan and the guidelines of the National Urban Transport Policy, the Government of Karnataka in its Government Order read at (1) above has created the State Directorate of Urban Land Transport (DULT), under the Urban Development Department. The key objective of the DULT is to ensure integration and co-ordination of land-use planning and development of transport related infrastructure in urban areas.

The function's of DULT has been defined in G.O. read at (1) above, with jurisdictions of seven Municipal Corporations in state, viz., Bangalore, Mysore, Mangalore, Hubli-Dharwar, Belgaum, Gulbarga and Bellary. Accordingly, one of the key functions is to take up Comprehensive Traffic and Transportation Studies [CTTS] for six cities, excluding Bangalore.

The team under the Commissioner, DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary/approaches. The specialists should have an understanding of the planning, technology for planning, land use changes, planning with focus on mobility related aspects and capacity building competencies.

Sri R. Revanna is working as Transport Planner read at (3) above dated 23-07-2008 from 24-11-2008 with a consolidated monthly salary of Rs. 25,000 per month. The consolidated pay of Sri R. Revanna has been enhanced by 10% of Rs. 25,000 that is Rs. 2,500 per month from 24-11-2009 as per GO at reference (7) above. The service of Sri R. Revanna as Transport Planner continues for a further period of one year from 24-11-2009 at Rs. 27,500/-per month.

Smt. P. Ananthalakshmi is working as Transport Planner as per Government Order No. UDD 4 CAR 2009, dated 16-05-2009 reaps as 2 above. The consolidated pay of Smt. P. Anantalakshmi has been enhanced by 10% of Rs. 18,000 that is by Rs. 1,800 say Rs. 2,000 per month from 24-11-2009 as per GO at reference (7) above.The service of Smt. P. Ananthalakshmi as Transport Planner continues for a further period of one year from 24-11-2010. The time of both the Transport Planner expires on 23-11-2010.

Now the Transport Planners have represented to increase their salary vide their letter dated 16-11-2010 in which both of them have requested for salary of Rs. 35,000/- per month. But after careful evaluation of the work carried out by these Transport Planners DULT has considered their request and approved to increase with an increment of their salary by 6% from 24-11-2010.

Hence the consolidated salary of R. Revanna will be 29,150/-per month, that of Smt. P. Ananthalakshmi will be 21,200 per month from 24-11-2010. It is also considered to extend their contract period to one year from 24-11-2010.

Hence the following Order,

**Government Order No. DULT 368 ADM 2010, Bangalore, Dated 13th Dececmber 2010**

Government is pleased to accord sanction to utilise the services of Sri. R. Revanna and Smt. P. Ananthalakshmi as Transport Planners for a further period of one year from 24-11-2009 in the Directorate of Urban Land Transport on contract basis against the sanctioned post of Transport Planner as per Government Order no. UDD 134 BMR 2006 dated 08-03-2007 with the following conditions.

1. The candidate shall furnish a bond with an undertaking to serve DULT for a period of one year.
2. In case of leaving the Directorate of Urban Land Transport before one year he or she should bring to the notice of Director, Urban Land Transport at least one month earlier.

**The services of the Transport Planners will be utilized in the following areas:**

1. Preparation of Comprehensive Traffic and Transportation Plan for six city Corporations
2. Periodic assessment of travel demand in given Urban Area

3. Determination of level of requirements to public transport and type of transport system on different corridors.
4. Setting of policy guidelines for development of total network in Urban Area
5. Road Network Planning in the Urban Area
6. Intensive monitoring certain high priority project of agencies
7. Formatting new projects rating to Traffic and transportation leading to convergence of works between different agencies.
8. Propose projects under JNNURM
9. Compilation, collation, updation and maintenance of transport network data, putting out information for general public on the website.
10. Interacting with BBMP, BDA, BMRDA, BMTC, BARL, Traffic police, KSRTC, BMRCL and Abide.
11. Comprehensive Mobility Plan for Tumkur, Udupi, Shimoga and Davanagere
12. Parking policy for tier II cities in Karnataka
13. Any other work assigned by the Commissioner, DULT

In the extended period of one year Sri R. Revanna, Transport Planner would be paid a consolidate lumpsum monthly salary of Rs. 29,150/- per month and Smt. P. Ananthalakshmi, Transport Planner would be paid a consolidated lumpsum monthly salary of Rs. 21,200/- per month from 24-11-2010. The services of these Transport Planners will be utilized for further period of one year or until such time the Commissioner, DULT deems fit.

By Order and in the name of the Governor of Karnataka

………………..

Commissioner
Directorate of Urban Land Transport
and Ex-officio Secretary to Government
Urban Development Department

PR. No. 61

## ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಡಾ॥ ಡಿ. ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರ ಸಮಿತಿಗೆ ಶ್ರೀ ಸುನೀಲ್ ವಲ್ಲಾಪುರೆ, ಮಾನ್ಯ ಶಾಸಕರು, ಚಿಂಚೋಳಿ ವಿಧಾನಸಭಾ ಕ್ಷೇತ್ರ ಇವರನ್ನು ಅಧ್ಯಕ್ಷರನ್ನಾಗಿ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ** : 1) ದಿನಾಂಕ 25–8–2010ರ ಸರ್ಕಾರದ ಆದೇಶ ಸಂಖ್ಯೆ: ಯೋಇ 77 ಯೋವಿವಿ 2008

2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯಾಲಯದ ದಿನಾಂಕ 4–12–2010ರ ಟಿಪ್ಪಣಿ ಸಂಖ್ಯೆ: ಮುಮ/197/2010.

**ಪ್ರಸ್ತಾವನೆ :**

ಡಾ॥ ಡಿ. ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಶಶೀಲ್ ಜಿ. ನಮೋಶಿರವರು ತಮ್ಮ ಹುದ್ದೆಗೆ ದಿನಾಂಕ 24–8–2010 ರಂದು ರಾಜೀನಾಮೆಯನ್ನು ಸಲ್ಲಿಸಿರುತ್ತಾರೆ. ಈ ರಾಜೀನಾಮೆಯನ್ನು ಸರ್ಕಾರವು ಅಂಗೀಕರಿಸಿ ಅದರಂತೆ ಉಲ್ಲೇಖ (1)ರಲ್ಲಿ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

ಉಲ್ಲೇಖ (2)ರ ಟಿಪ್ಪಣಿಯಲ್ಲಿ ಶ್ರೀ ಸುನೀಲ್ ವಲ್ಲಾಪುರೆ, ಮಾನ್ಯ ಶಾಸಕರು, ಚಿಂಚೋಳಿ ವಿಧಾನಸಭಾ ಕ್ಷೇತ್ರ ಇವರನ್ನು ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 84/ಎಸ್‌ಪಿಬಿ/ಹೆಚ್‌ಪಿಸಿ/2010(ಭಾ), ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2010**

ಶ್ರೀ ಸುನೀಲ್ ವಲ್ಲಾಪುರೆ, ಮಾನ್ಯ ಶಾಸಕರು, ಚಿಂಚೋಳಿ ವಿಧಾನಸಭಾ ಕ್ಷೇತ್ರ ಇವರನ್ನು ಡಾ॥ ಡಿ. ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರ ಸಮಿತಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಿ ಆದೇಶ ಹೊರಡಿಸಲಾಗಿದೆ. ನಿಬಂಧನೆ ಮತ್ತು ಷರತ್ತುಗಳ ಬಗ್ಗೆ ಆದೇಶವನ್ನು ನಂತರ ಹೊರಡಿಸಲಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾಬಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ–3
ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

ಪಿ.ಆರ್. ನಂ. 62

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ಸ್ಟೇಟ್ ಆಗ್ರೋ ಕಾರ್ನ್ ಪ್ರಾಡಕ್ಟ್ಸ್ ಲಿಮಿಟೆಡ್ ಸಂಸ್ಥೆಯಲ್ಲಿ ಕೆಲಸ ಮಾಡುವ ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆ – ಷರತ್ತು ಮತ್ತು ನಿಬಂಧನೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಐ 305 ಎಸ್‌ಪಿಐ 2009, ದಿನಾಂಕ 10.12.2009

**ಸರ್ಕಾರಿ ಆದೇಶ ಸಂಖ್ಯೆ: ಸಿಐ 439 ಎಸ್‌ಪಿಐ 2010, ಬೆಂಗಳೂರು ದಿನಾಂಕ 21–12–2010**

ಕರ್ನಾಟಕ ಸ್ಟೇಟ್ ಆಗ್ರೋ ಕಾರ್ನ್ ಪ್ರಾಡಕ್ಟ್ಸ್ ಲಿಮಿಟೆಡ್ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆ ಜಾರಿಗೊಳಿಸುವ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶಕ್ಕೆ ಲಗತ್ತಿಸಿದಂತೆ ಹೊರಡಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆ.ಇ. 1525 ವೆಚ್ಚ–1/2010, ದಿನಾಂಕ: 23.10.2010 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## Annexure to G.O. No: CI 305 SPI 2009, dated: 21.12.2009

**LOANS & ADVANCES BY STATE GOVERNMENT TERMS & CONDITIONS**

| | |
|---|---|
| 1. Sanctioning Authority | Government of Karnataka |
| 2. Sanction (G.O. No. & Date) | No. CI 305 SPI 2009, dt: 10.12.2009 |
| 3. To whom sanctioned | Managing Director, Karnataka State Agro Com Products Ltd., Bangalore |
| 4. Amount sanctioned (in words & figures) | Rs. 672 lakh (Rupees Six hundred seventy two lakhs only) |
| 5. Sanction valid up to | |
| 6. Purpose of the Loan | VRS payment |
| 7. Payable in cash or adjustment | Cash |
| 8. Plan or Non-Plan | Non – Plan |
| 9. Head of Account to which the loan is debitable | 6852-02-190-4-02-394 |
| 10 Progressive amount of loan sanctioned to date in the financial year. | Rs. 672 lakh |
| 11 Period of Loan | 7 Years |
| 12 Moratorium towards repayment, if any. | No moratorium |
| 13 Date & Year from which repayment is to commence | Repayment will be from the year 2011-12 |
| 14 mode of repayment | DD or Cash |
| 15 Interest | |
| g) Normal rate | 9% |
| h) Penal rate of interest in the even of default in repayment/interest payment | 2.50% |
| i) Mode of recovery of Interest | Cash or DD |
| 16. Adjustment or overdue loans, if any | — |
| 17. Authority who countersigns the payee's receipt | Commissioner for Industrial Development & Director of Industries. |
| 18. Authority who maintains loan Ledger & watches Recovery | -do- |
| 19. Authority responsible for reconciliation and monitoring of loan | -do- |
| 20. Authority to whom utilization certificates are to be Given | -do- |
| 21. Authority who should furnish estimate of recovery of loan & interest for inclusion in the Budget Estimates | -do- |

**A.V. Srinivasa Dikshit**
Desk Officer (Technical Cell)
Commerce & Industries Department

P.R. 79

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ)., ಮಂಡ್ಯ – ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮರುಪಾವತಿಗಾಗಿ (ದಿನಾಂಕ 30.09.2010 ಮತ್ತು 31.12.2010ರ ಅಂತ್ಯಕ್ಕೆ) ಸರ್ಕಾರದಿಂದ ಅಸಲು ಮತ್ತು ಬಡ್ಡಿ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007 ದಿನಾಂಕ 26.03.2010.
2. ಸರ್ಕಾರದ ಆದೇಶ ಸಂಖ್ಯೆ.: ಸಿಐ 184 ಎಸ್‌ಜಿಎಫ್ 2007 ದಿನಾಂಕ 23.07.2010
3. ರೀಜನಲ್ ಚೀಫ್, ಹುಡ್ಕೋರವರ ಪತ್ರ ಸಂಖ್ಯೆ: HUDCO/BRO/KAR/MSCL/16757&16989/2010/1185 ದಿನಾಂಕ 19.10.2010.
4. ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: MSCO:MD:DO:2010:127 ದಿನಾಂಕ: 7–12–2010.
5. ಡೆಪ್ಯೂಟಿ ಚೀಫ್, (ಫೈನಾನ್ಸ್) ಹುಡ್ಕೋರವರ ಪತ್ರ ಸಂಖ್ಯೆ: HUDCO/BRO/KAR/MSCL/16757 & 16989/2010 ದಿನಾಂಕ: 14–12–2010.

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ 5726.16 ಲಕ್ಷ ರೂ.ಗಳ ಸಾಲ ಪಡೆಯಲು ದಿನಾಂಕ 30.07.2001ರಂದು ಕಾರ್ಖಾನೆಯು ಹುಡ್ಕೋದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಮೇಲೆ ಓದಲಾದ (1) ಮತ್ತು (2)ರಲ್ಲಿರುವ ಆದೇಶಗಳಲ್ಲಿ ಹುಡ್ಕೋ ಸಂಸ್ಥೆಯು ಮಾಡಿದ OTS offer ನಂತೆ ಸಾಲದ ಮೇಲಿನ ಕ್ರೋಢೀಕೃತ ಬಡ್ಡಿ ಪಾವತಿಗಾಗಿ ಒಟ್ಟು 4605.86 ಲಕ್ಷ ರೂ.ಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ರೀಜನಲ್ ಚೀಫ್, ಹುಡ್ಕೋರವರ ಪತ್ರದಲ್ಲಿ OTS offer ನಂತೆ ಸೆಪ್ಟೆಂಬರ್ 2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 369.81 ಲಕ್ಷ ರೂ.ಗಳು ಮತ್ತು ಡಿಸೆಂಬರ್ 2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 357.77 ಲಕ್ಷ ರೂ.ಗಳು ಸೇರಿ ಒಟ್ಟು 727.58 ಲಕ್ಷ ರೂ.ಗಳನ್ನು ಕಾರ್ಖಾನೆಯು ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾಗಿದೆಂದು ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಗೆ ಬೇಡಿಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ (4)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆರವರ ಪತ್ರದಲ್ಲಿ OTS offer ನಂತೆ ದಿನಾಂಕ 30.09.2010ರ ಮತ್ತು ಡಿಸೆಂಬರ್ 2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 727.58 ಲಕ್ಷ ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದ್ದು, ಹುಡ್ಕೋ ಸಂಸ್ಥೆಗೆ ಪಾವತಿಸಲು ಕಾರ್ಖಾನೆಯ ಬಳಿ ಹಣ ಇಲ್ಲದಿರುವುದರಿಂದ ಸರ್ಕಾರದಿಂದ ಹಣ ಬಿಡುಗಡೆ ಮಾಡುವಂತೆ ಮನವಿ ಮಾಡಿದ್ದಾರೆ.

ಮೇಲೆ ಓದಲಾದ (5)ರಲ್ಲಿರುವ ಡೆಪ್ಯೂಟಿ ಚೀಫ್, (ಫೈನಾನ್ಸ್) ಹುಡ್ಕೋರವರ ಪತ್ರದಲ್ಲಿ OTS ಒಪ್ಪಂದದಂತೆ ದಿನಾಂಕ 30.09.2010ರಿಂದ 31.12.2010ರ ಅಂತ್ಯಕ್ಕೆ ಪಾವತಿಸಬೇಕಾದ ಹಣದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಗೆ ಹೆಚ್ಚುವರಿ ಆರ್ಥಿಕ ರಿಯಾಯಿತಿ (additional financial benefit) ರೂ. 173.03 ಲಕ್ಷಗಳನ್ನು ನೀಡಿರುವುದಾಗಿ ತಿಳಿಸಿ ಈ ಮೊತ್ತವನ್ನು ಡಿಸೆಂಬರ್ ಅಂತ್ಯಕ್ಕೆ ನೀಡಬೇಕಾದ ಹಣದಲ್ಲಿ ಕಳೆದು ಬಾಕಿ ಪಾವತಿ ಮಾಡಬೇಕೆಂದು ತಿಳಿಸಿರುತ್ತಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಹುಡ್ಕೋ ಸಂಸ್ಥೆಯ ಜೊತೆಗೆ ಮಾಡಿಕೊಳ್ಳಲಾಗಿರುವ OTS offer ನಂತೆ ದಿನಾಂಕ 30.09.2010ರ ಅಂತ್ಯಕ್ಕೆ ಮತ್ತು 31.12.2010ರ ಅಂತ್ಯಕ್ಕೆ ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ರೂ. 554.55 ಲಕ್ಷಗಳನ್ನು (727.58–173.03) ಸರ್ಕಾರದಿಂದ ಪಾವತಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007 (3) ದಿನಾಂಕ 18–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯ ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ 5726.16 ಲಕ್ಷ ರೂ.ಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ಸೆಪ್ಟೆಂಬರ್ 2010ರ ಅಂತ್ಯಕ್ಕೆ ಮತ್ತು ಡಿಸೆಂಬರ್ 2010ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು 554.55 ಲಕ್ಷ ರೂ.ಗಳನ್ನು (ಐದನೂರ ಐವತ್ತನಾಲ್ಕು ಲಕ್ಷ ಮತ್ತು ಐವತ್ತೈದು ಸಾವಿರ ರೂ.ಗಳು ಮಾತ್ರ) ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಇರುವ ಹಣವನ್ನು ಕಾಲಕಾಲಕ್ಕೆ ಕಾರ್ಖಾನೆಯು ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳುವುದು.

2010–11ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಲೆಕ್ಕ ಶೀರ್ಷಿಕೆ "4860–04–190–1–00–211" investment (Plan) ಅಡಿಯಲ್ಲಿ ಹೆಚ್ಚುವರಿ ಅನುದಾನ ರೂ. 554.55 ಲಕ್ಷಗಳನ್ನು ಒದಗಿಸಿ ಈ ಹಣವನ್ನು ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1741 ವೆಚ್ಚ–1/2010, ದಿನಾಂಕ 16.12.2010ರ ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 175 ಬಿಆರ್‌ಎಸ್ 2010, ದಿನಾಂಕ 16.12.2010ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಪಿ.ಆರ್. 80

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಿಶೇಷ ಕೋಶ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಎಸ್.ಡಿ.ಪಿ. ಯೋಜನೆಯ ಯಶಸ್ವಿ ಅನುಷ್ಠಾನ ಕುರಿತು

**ಉಲ್ಲೇಖ :**
1. ಸರ್ಕಾರದ ಸುತ್ತೋಲೆ ಸಂ. ಪಿಡಿ 13 ಪಿಎಂಎಂ 2009 ದಿನಾಂಕ 4.2.2009.
2. ಸರ್ಕಾರದ ಸುತ್ತೋಲೆ ಸಂ. ಪಿಡಿ 40 ಎಸ್‌ಪಿಬಿ ಹೆಚ್‌ಪಿಸಿ/2009 ದಿನಾಂಕ 18.03.2009 ಮತ್ತು
3. ಸಮ ಸಂಖ್ಯೆಯ ಸೇರ್ಪಡೆ ದಿನಾಂಕ 3/4/2009
4. ಅ.ಸ. ಪತ್ರ ಸಂಖ್ಯೆ ಪಿಡಿ 85 ಪಿಎಂಎಂ 2008 ದಿನಾಂಕ: 20–11–2008

**ಪ್ರಸ್ತಾವನೆ**

ಡಾ॥ ನಂಜುಂಡಪ್ಪ ವರದಿಯ ಶಿಫಾರಸ್ಸಿನ ಮೇರೆಗೆ ಹಿಂದುಳಿದ ಪ್ರದೇಶಗಳ ಸಮತೋಲನ ಅಭಿವೃದ್ಧಿಗಾಗಿ ಸರ್ಕಾರವು 2007–08ನೇ ಸಾಲಿನಿಂದ ವಿಶೇಷ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಅನುದಾನವನ್ನು ನಿಗದಿಪಡಿಸುತ್ತಾ ಬಂದಿದೆ. ಆಡಳಿತ ಇಲಾಖೆಗಳು ಪ್ರಸ್ತಾಪಿಸಿದ ಕ್ರಿಯಾ ಯೋಜನೆಗಳಿಗೆ ಅನುಮೋದನೆ ನೀಡಲಾಗಿ ಅಂತಹ ಯೋಜನೆಗಳನ್ನು ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಅನುಷ್ಠಾನದ ಮೇಲ್ವಿಚಾರಣೆ ಸಲುವಾಗಿ ಜಿಲ್ಲಾ ಪಂಚಾಯತಿಯ ಮುಖ್ಯ ಯೋಜನಾಧಿಕಾರಿಗಳನ್ನು ನೋಡಲ್ ಅಧಿಕಾರಿಗಳಾಗಿ ನೇಮಿಸಿದೆ (ಉಲ್ಲೇಖ–2) ಅದರಂತೆ ಅವರು ಪ್ರತಿ ತಿಂಗಳು ಈ ಕಾಮಗಾರಿಗಳ ವಿವರಗಳನ್ನು ಅಂತರ್ಜಾಲದಲ್ಲಿ ನಮೂದಿಸುವ ಬಗ್ಗೆ ಈಗಾಗಲೇ ಇಲಾಖೆಗಳ ನೋಡಲ್ ಅಧಿಕಾರಿಗಳಿಗೆ, ರಾಜ್ಯ ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ತರಬೇತಿ ನೀಡಲಾಗಿದೆ. ಜೊತೆಗೆ ಪ್ರತಿ ತಿಂಗಳ ಎಂ.ಎಂ.ಆರ್ ಹಾಗೂ ಕೆ.ಡಿ.ಪಿ. ಸಭೆಯಲ್ಲಿ ಎಸ್.ಡಿ.ಪಿಯ ಪ್ರಗತಿ ಪರಿಶೀಲನೆ ಮಾಡುವ ಬಗ್ಗೆ ಮೇಲೆ ನಮೂದಿಸಿರುವ ಉಲ್ಲೇಖ–1 ಮತ್ತು 2 ರ ಸುತ್ತೋಲೆಗಳಲ್ಲಿ ಸೂಚನೆಯನ್ನು ನೀಡಲಾಗಿದೆ.

ರಾಜ್ಯ ಮಟ್ಟದಲ್ಲಿ ಪ್ರತಿ ಇಲಾಖೆಯ ಎಂ.ಎಂ.ಆರ್. ಸಭೆಗಳಲ್ಲಿಯೂ ಸಹ ಎಸ್.ಡಿ.ಪಿ ಯ ಪ್ರಗತಿ ಪರಿಶೀಲನೆ ಮಾಡುವ ಬಗ್ಗೆ ಸೂಚಿಸಲಾಗಿತ್ತು ಹಾಗೂ ತಾಲ್ಲೂಕುವಾರು ಎಸ್.ಡಿ.ಪಿ ಯೋಜನೆಯ ವರದಿಯನ್ನು ವಿಶೇಷ ಕೋಶಕ್ಕೆ ಪ್ರತಿ ತಿಂಗಳ 20ನೇ ತಾರೀಖಿನೊಳಗೆ ಕಳುಹಿಸಿಕೊಡುವಂತೆಯೂ ಸಹ ಉಲ್ಲೇಖ–3 ಮತ್ತು 4 ರಲ್ಲಿ ಸೂಚಿಸಲಾಗಿತ್ತು.

ಇಲ್ಲಿಯವರೆಗೆ ರಾಜ್ಯ ಮಟ್ಟದಲ್ಲಿ ನಡೆದ ವಿಶೇಷ ಅಭಿವೃದ್ಧಿ ಯೋಜನೆ ಪ್ರಗತಿ ಪರಿಶೀಲನಾ ಸಭೆಯಲ್ಲಿ ಪ್ರತಿ ತಿಂಗಳ 5ನೇ ತಾರೀಖಿನ ಒಳಗಾಗಿ on-line ಎಂ.ಐಎಸ್. ಮೂಲಕ ಮಾಹಿತಿ ಅಳವಡಿಸದೇ ಇರುವ ಬಗ್ಗೆ ಚರ್ಚಿಸಲಾಗಿದೆ, ಹಾಗೂ ಇದನ್ನು ಗಂಭೀರವಾಗಿ ಪರಿಗಣಿಸಿದೆ. ಕಾರಣ ಜಿಲ್ಲಾ ಹಾಗೂ ರಾಜ್ಯ ಮಟ್ಟದ ಪರಿಶೀಲನಾ ಸಭೆಗಳನ್ನು ನಡೆಸುವಾಗ ಡಾ॥ ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರ ಸಮಿತಿಗೆ ಹಾಗೂ ರಾಜ್ಯ ಮಟ್ಟದಲ್ಲಿ ನಡೆಯುವ ಎಸ್.ಡಿ.ಪಿ. ಸಭೆಗಳ ಪರಿಶೀಲನಾ ಸಭೆಗೆ ಪೂರ್ಣ ಪ್ರಮಾಣದ ಮಾಹಿತಿ ಲಭ್ಯ ಇಲ್ಲದೇ ಇರುವುದನ್ನೂ ಸಹ ಗಂಭೀರವಾಗಿ ಪರಿಗಣಿಸಲಾಗಿದೆ.

2010–11 ನೇ ಸಾಲಿನ ಕ್ರಿಯಾ ಯೋಜನೆಗಳು ಈಗಾಗಲೇ ಅನುಮೋದನೆಗೊಂಡು ಇಲಾಖೆಗಳು ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದರೂ ಪ್ರಗತಿ ವಿವರಗಳನ್ನು ನಿಯಮಿತವಾಗಿ on-line ಎಂ.ಐ.ಎಸ್. ನಲ್ಲಿ ಆಗಲಿ ಅಥವಾ 20ನೇ ತಾರೀಖಿನೊಳಗೆ ವಿಶೇಷ ಕೋಶಕ್ಕೆ ನಿಗದಿತ ನಮೂನೆಯಲ್ಲಿ hard copy ಆಗಲಿ ಸಲ್ಲಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಎಸ್.ಡಿ.ಪಿ. ಯು ಸರ್ಕಾರದ ಒಂದು ಮಹತ್ತರವಾದ ಯೋಜನೆಯಾಗಿದ್ದು, ಇದರ ಅನುಷ್ಠಾನದಲ್ಲಿ ಅಧಿಕಾರಿಗಳು ಹೆಚ್ಚಿನ ಗಮನ ವಹಿಸುವ ಅಗತ್ಯತೆ ಕಂಡು ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 40 ಎಸ್‌ಪಿಬಿ ಹೆಚ್‌ಪಿಸಿ 2009, ಬೆಂಗಳೂರು ದಿನಾಂಕ 28–10–2010**

ಮೇಲೆ ಪ್ರಸ್ತಾಪಿಸಿದ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

1 ಎಸ್.ಡಿ.ಪಿ. schemes ಗಳಿಗೆ ಪ್ರತ್ಯೇಕವಾದ MPIC ನಮೂನೆ ತಯಾರಿಸುವುದು. ಸದರಿ MPIC ನಮೂನೆಗಳನ್ನು ತಮ್ಮ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ತುರ್ತಾಗಿ ಕಳುಹಿಸುವುದು.

2. ಒಂದು ವೇಳೆ ಎಸ್.ಡಿ.ಪಿ. ಯೋಜನೆಯು ಸಾಮಾನ್ಯ ಯೋಜನೆಯ ಒಂದು ಭಾಗವಾಗಿದ್ದಲ್ಲಿ ಎಸ್.ಡಿ.ಪಿ. ಮೊತ್ತಕ್ಕೇ ಹಾಗೂ ಎಸ್.ಡಿ.ಪಿಯೇತರ ಮೊತ್ತಕ್ಕೇ ಪ್ರತ್ಯೇಕ MPIC ನಮೂನೆಗಳನ್ನು ತಯಾರಿಸುವುದು.

3. ಅನುಮೋದಿಸಿದ ಕ್ರಿಯಾ ಯೋಜನೆಗಳನ್ನು ಆಧರಿಸಿ ಕೂಡಲೇ ಆಯಾ ಇಲಾಖೆಯ ಯೋಜನೆಗಳಿಗೆ ಸಂಬಂಧಿಸಿದಂತೆ ಆರ್ಥಿಕ ಮತ್ತು ಭೌತಿಕ ಗುರಿಗಳನ್ನು MPIC ನಮೂನೆಯನ್ನಾಧರಿಸಿ ಕೂಡಲೇ ಎಂ.ಐ.ಎಸ್.ನಲ್ಲಿ ಅಳವಡಿಸತಕ್ಕದ್ದು.

4. ಸಂಬಂಧಪಟ್ಟ ಇಲಾಖೆಗಳು ಜಿಲ್ಲಾ ಮಟ್ಟದಲ್ಲಿ ಮಾಹಿತಿಯನ್ನು ಗಣಕೀಕರಿಸಲು ಬೇಕಾದ ಡಾಟಾ ಎಂಟ್ರಿ ಆಪರೇಟರ್ ಹಾಗೂ ಮಾಹಿತಿಯನ್ನು ಅನುಮೋದಿಸುವ ಡಾಟಾ ಎಂಟ್ರಿ ಅಪ್ರೂವರ್‌ಗಳನ್ನು ನೇಮಿಸಿ ಇವರುಗಳ ಹೆಸರು ಮತ್ತು ದೂರವಾಣಿ ಸಂಖ್ಯೆಯನ್ನು ಯೋಜನಾ ಅಧಿಕಾರಿಗಳಿಗೆ ಕೊಡುವುದು. ಈಗಾಗಲೇ ನೇಮಕ ಮಾಡಿರುವ ಸಿಬ್ಬಂದಿ ಇದ್ದಲ್ಲಿ ಇವರಿಂದ ಮಾಹಿತಿಯನ್ನು ಗಣಕೀಕರಿಸುವ ಬಗ್ಗೆ ಕೂಡಲೇ ಕ್ರಮ ಜರುಗಿಸುವುದು. ಪ್ರತಿ ಇಲಾಖೆಯವರು ಜಿಲ್ಲಾ ಮಟ್ಟದಲ್ಲಿ ಎಸ್.ಡಿ.ಪಿ. ಮಾಹಿತಿ ನಿರ್ವಹಣೆಗಾಗಿ ಒಂದು ನೋಡಲ್ ಅಧಿಕಾರಿಯನ್ನು ನೇಮಿಸಿ ಇವರ ಇಮೇಲ್ ಮತ್ತು ಸಂಪರ್ಕಿಸಬಹುದಾದ ವಿಳಾಸ/ದೂರವಾಣಿ ವಿವರಗಳ ಮಾಹಿತಿಯನ್ನು ಮುಖ್ಯ ಯೋಜನಾಧಿಕಾರಿಗಳಿಗೆ ನೀಡುವುದು. ಪ್ರತಿ ಇಲಾಖೆಯವರು 5ನೇ ತಾರೀಖಿನೊಳಗೆ ಮಾಹಿತಿಯನ್ನು ತಪ್ಪದೇ ಗಣಕೀಕರಿಸುವುದು. 6ನೇ ತಾರೀಖಿನಂದು ಮುಖ್ಯ ಯೋಜನಾಧಿಕಾರಿ ಅವರು ಈ ಮಾಹಿತಿಯ ವರದಿಯನ್ನು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯವರಿಗೆ ಹಾಗೂ ಜಿಲ್ಲಾಧಿಕಾರಿಗಳಿಗೆ ನೀಡಬೇಕು. ಒಂದು ವೇಳೆ ಜಿಲ್ಲೆ/ತಾಲ್ಲೂಕು ಮಟ್ಟದ ಅಧಿಕಾರಿಗಳು ಮಾಹಿತಿಯನ್ನು ಅಂತರ್ಜಾಲದಲ್ಲಿ ಅಳವಡಿಸದೇ ಇದ್ದರೆ ಅಂತಹವರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಮುಖ್ಯ ಯೋಜನಾಧಿಕಾರಿಗಳು ಒಂದು ವರದಿಯನ್ನು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಸಲ್ಲಿಸುವುದು. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಅಂತಹ ಸಿಬ್ಬಂದಿ ಮೇಲೆ ಸೂಕ್ತ ಕ್ರಮವನ್ನು ಜರುಗಿಸಿ ಅವರ ಸಂಬಳವನ್ನು ಮಾಹಿತಿಯನ್ನು ಅಳವಡಿಸುವವರೆಗೆ ತಡೆಹಿಡಿಯುವುದು.

5. ರಾಜ್ಯ ಮಟ್ಟದಲ್ಲಿ ಇಲಾಖೆಯ ಎಂ ಎಂ ಆರ್ ಸಭೆಯಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ನಡೆಯುವ ಕೆ.ಡಿ.ಪಿ. ಸಭೆಯಲ್ಲಿ ತಪ್ಪದೇ ಎಸ್.ಡಿ.ಪಿಯ ಪ್ರಗತಿ ಪರಿಶೀಲನೆ ಮಾಡತಕ್ಕದ್ದು.

6. ಎಸ್.ಡಿ.ಪಿ. ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಉದ್ದೇಶದಿಂದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಯೋಜನಾಧಿಕಾರಿಗಳ ಬದಲಾಗಿ ಜಿಲ್ಲಾಧಿಕಾರಿಗಳನ್ನು ವಿಶೇಷ ಅಭಿವೃದ್ಧಿ ಯೋಜನೆಗೆ ನೋಡಲ್ ಅಧಿಕಾರಿಯನ್ನಾಗಿ ನೇಮಿಸಿದೆ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಇವರನ್ನು ಹೆಚ್ಚುವರಿ ನೋಡಲ್ ಅಧಿಕಾರಿಯನ್ನಾಗಿ ನೇಮಿಸಿದೆ. ಜಿಲ್ಲಾಧಿಕಾರಿಯವರು ಪ್ರತಿ ತಿಂಗಳಿಗೊಮ್ಮೆ ಯೋಜನೆಯ ಪ್ರಗತಿ ಪರಿಶೀಲನೆ ಮಾಡುವುದು. ಜಿಲ್ಲಾ ಪಂಚಾಯತ್‌ನ ಮುಖ್ಯ ಯೋಜನಾಧಿಕಾರಿಗಳು ಮಾಹಿತಿ ಸಂಗ್ರಹಣೆ, MPIC ನಮೂನೆಯಲ್ಲಿ ಮಾಹಿತಿಯನ್ನು ಪ್ರತಿ ತಿಂಗಳು ಆರ್ಥಿಕ ಮತ್ತು ಭೌತಿಕ ಪ್ರಗತಿಯ ವಿವರಗಳನ್ನು MIS ನಲ್ಲಿ ಅಳವಡಿಸುವಂತೆ ಉಸ್ತುವಾರಿ ವಹಿಸಿ ಜಿಲ್ಲಾಧಿಕಾರಿಗಳಿಂದ ನಡೆಯುವ ಸಭೆಗೆ ಅಜೆಂಡಾ, ನಡವಳಿಗಳನ್ನು ತಯಾರಿಸಿ ಹಿಂದಿನ ಸಭೆಗಳಲ್ಲಿ ತೆಗೆದುಕೊಂಡ ನಿರ್ಣಯಗಳ ಬಗ್ಗೆ ಅನುಸರಣಾ ವರದಿಯನ್ನು ಸಭೆಗೆ ಮಂಡಿಸುವುದು.
7. KPTCL, ESCOMS, PWD etc ಇಲಾಖೆಗಳಲ್ಲಿಯೂ ಸಹ ಸಿಬ್ಬಂದಿಯು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಮಾಹಿತಿಯನ್ನು ಅಳವಡಿಸದೇ ಇದ್ದಲ್ಲಿ ಆಯಾ ಇಲಾಖೆಯ ನೋಡಲ್ ಅಧಿಕಾರಿಗಳು ತಪ್ಪಿತಸ್ಥ ಸಿಬ್ಬಂದಿಯ ಸಂಬಳವನ್ನು ಅವರು ಮಾಹಿತಿಯನ್ನು ಅಳವಡಿಸುವವರೆಗೆ ತಡೆಹಿಡಿಯುವ ಬಗ್ಗೆ ಸೂಕ್ತ ಕ್ರಮ ಜರುಗಿಸುವುದು.
8. ಯೋಜನೆಯ ಮಾಹಿತಿ ಅಳವಡಿಕೆಯಲ್ಲಿ ಏನಾದರೂ ತೊಂದರೆ ಕಂಡುಬಂದಲ್ಲಿ ಎನ್.ಐ.ಸಿ ವತಿಯಿಂದ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಮಾಹಿತಿ ಅಧಿಕಾರಿ (DIO) ಇವರ ಸಹಯೋಗದೊಂದಿಗೆ ಮುಖ್ಯ ಯೋಜನಾಧಿಕಾರಿಯವರು ನಿವಾರಣೆ ಮಾಡುವುದು.
9. ಅಂತರ್ಜಾಲದಲ್ಲಿನ ಮಾಹಿತಿ ವ್ಯವಸ್ಥೆಯಲ್ಲಿ ಏನಾದರೂ ತೊಂದರೆ ಕಂಡು ಬಂದಲ್ಲಿ ಎನ್.ಐ.ಸಿ. ಅಥವಾ ವಿಶೇಷ ಕೋಶವನ್ನು ಕೂಡಲೇ ಸಂಪರ್ಕಿಸಿ ಮುಖ್ಯ ಯೋಜನಾಧಿಕಾರಿಯವರು ಪರಿಹಾರ ಕ್ರಮ ಕೈಕೊಳ್ಳುವುದು (NIC - Mr. Lakshmeesha, Principal System Analyst – Ph. No. 9449803802).
10. ಸಾಧ್ಯವಾದಷ್ಟು ಗುರಿಯ ಪ್ರಕಾರವೇ ಪ್ರಗತಿಯನ್ನು ಸಾಧಿಸುವ ಪ್ರಯತ್ನ ಮಾಡಬೇಕು.
11. ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನವು ಲ್ಯಾಪ್ಸ್ ಆಗದಂತೆ ವರ್ಷದಲ್ಲಿ ಪೂರ್ತಿ ವಿನಿಯೋಗ ಮಾಡತಕ್ಕದ್ದು.
12. ಕೆಲವು ಇಲಾಖೆಗಳಿಗೆ ಜಿಲ್ಲಾ ಮಟ್ಟದ ಅಧಿಕಾರಿಗಳಿಲ್ಲದ ಪ್ರಯುಕ್ತ ರಾಜ್ಯ ಮಟ್ಟದಲ್ಲೇ ವಿವರಗಳನ್ನು ಎಂ ಐ ಎಸ್ ನಲ್ಲಿ ಅಳವಡಿಸಲು ಅನುಮತಿ ನೀಡಲಾಗಿದೆ. (ಅವುಗಳೆಂದರೆ ವಸತಿ, ವಾಣಿಜ್ಯ ಮತ್ತು ಕೈಗಾರಿಕೆ, ಕಾರ್ಮಿಕ, ನಗರಾಭಿವೃದ್ಧಿ, ಪ್ರವಾಸೋದ್ಯಮ, ಮೂಲಭೂತ ಸೌಲಭ್ಯ ಅಭಿವೃದ್ಧಿ ಒಳಾಡಳಿತ ಮತ್ತು ಇಂಧನ ಇಲಾಖೆಗಳು) ಈ ಇಲಾಖೆಗಳೂ ಸಹ ಪ್ರತಿ ತಿಂಗಳ 5ನೇ ತಾರೀಖಿನೊಳಗೆ ತಾಲ್ಲೂಕುವಾರು MPIC ಹಾಗೂ MIS ನಮೂನೆಗಳಲ್ಲಿ ವಿವರಗಳನ್ನು ತಪ್ಪದೇ ಅಂತರ್ಜಾಲದಲ್ಲಿ ನಮೂದಿಸಬೇಕು.
13.. ರಾಜ್ಯ ಮಟ್ಟದ ಅನುಷ್ಠಾನ ಇಲಾಖೆಗಳು ಕಾಲಕಾಲಕ್ಕೆ ಬಿಡುಗಡೆ ಮಾಡುವ ಅನುದಾನಕ್ಕೆ ಹೊರಡಿಸುವ ಆದೇಶಗಳ ಪ್ರತಿಗಳನ್ನು ಕೂಡಲೇ ವಿಶೇಷ ಕೋಶಕ್ಕೆ ಕಳುಹಿಸುವುದಲ್ಲದೇ ತಮ್ಮ ಇಲಾಖೆಯ ಜಿಲ್ಲಾ ಮಟ್ಟದ ಅನುಷ್ಠಾನ ಅಧಿಕಾರಿಗಳಿಗೆ ತಪ್ಪದೇ ಕಳುಹಿಸುವುದು.
14. ಇನ್ನು ಮುಂದೆ ಗಣಕೀಕೃತ MPIC & MIS ಮಾಹಿತಿಯನ್ನು ಮಾತ್ರ ಪರಿಶೀಲನಾ ಸಭೆಗಳಲ್ಲಿ ಉಪಯೋಗಿಸುವುದು.
15. ರಾಜ್ಯ ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳೂ ಸಹ ಕಾಮಗಾರಿಗಳು ಪೂರ್ಣಗೊಂಡಿದ್ದಲ್ಲಿ Utilization Certificate ನ ಪ್ರತಿಯನ್ನು ವಿಶೇಷ ಕೋಶಕ್ಕೆ ಕಳುಹಿಸುವುದು. ಜಿಲ್ಲಾ ಪಂಚಾಯತ್‌ಗಳಲ್ಲಿ ನೇಮಕಗೊಂಡ ತಾಲ್ಲೂಕುಗಳ ನೋಡಲ್ ಅಧಿಕಾರಿಗಳೂ ಸಹ ಪ್ರತಿ ತಿಂಗಳು ಎಸ್.ಡಿ.ಪಿ. ಪ್ರಗತಿಯನ್ನು ಪರಿಶೀಲಿಸಿ ಸ್ಥಳ ಪರಿವೀಕ್ಷಣೆ ಮಾಡುವುದರ ಜೊತೆಗೆ ಸಭೆಯ ಅಜೆಂಡಾ ನಡವಳಿಗಳು ಹಾಗೂ ಪರಿವೀಕ್ಷಣೆ ವರದಿಯನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಹಾಗೂ ವಿಶೇಷ ಕೋಶಕ್ಕೆ ಕಳುಹಿಸುವುದು.
16. ಪ್ರಾದೇಶಿಕ ಆಯುಕ್ತರು ತಮ್ಮ ತ್ರೈಮಾಸಿಕ ಪರಿಶೀಲನಾ ಸಭೆಗಳಲ್ಲಿ ಅಥವಾ ಜಿಲ್ಲಾ ಪ್ರವಾಸದ ವೇಳೆಯಲ್ಲಿ ಎಸ್.ಡಿ.ಪಿ. ಕುರಿತು ಪರಿಶೀಲನೆ ಮಾಡಬೇಕು. ಇವರು ಸಹ ಗಣಕೀಕೃತ ಮಾಹಿತಿಯನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬೇಕು. ಪ್ರಾದೇಶಿಕ ಆಯುಕ್ತರು ಜಿಲ್ಲಾ ಪ್ರವಾಸ ಕೈಗೊಂಡಾಗ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಸಭೆಯ ವಿಷಯ ಸೂಚಿ ಹಾಗೂ ನಡವಳಿಗಳನ್ನು ತಯಾರಿಸುವಲ್ಲಿ ಸೂಕ್ತ ಕ್ರಮ ಕೈಗೊಳ್ಳಬೇಕು.
17. ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ತಮ್ಮ ಜಿಲ್ಲೆಗಳಲ್ಲಿ ಪರಿಶೀಲನಾ ಸಭೆಯನ್ನು ನಡೆಸಿದಾಗ ಎಸ್.ಡಿ.ಪಿ ಯೋಜನೆಯ ಪ್ರಗತಿಯನ್ನೂ ಸಹ ಪರಿಶೀಲಿಸುವುದು. ಇದಲ್ಲದೇ ಎಸ್.ಡಿ.ಪಿ. ಯೋಜನೆಗೆ ತಯಾರಿಸಿದ MIS ನಲ್ಲಿ ಮಾಹಿತಿಯನ್ನು ಅಳವಡಿಸುತ್ತಿರುವ ಬಗ್ಗೆ ವಿಶೇಷ ಗಮನ ಹರಿಸುವುದು ಹಾಗೂ ಎಸ್.ಡಿ.ಪಿಯಲ್ಲಿ ಕೈಗೆತ್ತಿಕೊಂಡ ಕಾಮಗಾರಿಗಳ ಸ್ಥಳ ಪರಿವೀಕ್ಷಣೆ ಕೈಗೊಳ್ಳುವುದು. ಸಭೆಗಳ ಅಜೆಂಡಾ ಹಾಗೂ ನಡವಳಿಗಳನ್ನು ಹಾಗೂ ಪರಿವೀಕ್ಷಣಾ ವರದಿಯನ್ನು ವಿಶೇಷ ಕೋಶಕ್ಕೆ ಕಳುಹಿಸುವುದು.
18. ಒಟ್ಟು ಹಿಂದುಳಿದ ಪ್ರದೇಶಗಳು ಸಹ ರಾಜ್ಯದ ಸರಾಸರಿ ಅಭಿವೃದ್ಧಿ ಸ್ಥರವನ್ನು ದಾಟುವ ನಿಟ್ಟಿನಲ್ಲಿ ಎಲ್ಲಾ ಅನುಷ್ಠಾನಾಧಿಕಾರಿಗಳು ಹಾಗೂ ಉಸ್ತುವಾರಿ ವಹಿಸಿರುವ ಅಧಿಕಾರಿಗಳು ಮುತುವರ್ಜಿ ವಹಿಸಿ ವಿಶೇಷ ಅಭಿವೃದ್ಧಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕ್ರಮವಹಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಸರ್ಕಾರದ ಉಪ ಕಾರ್ಯದರ್ಶಿ

ವಿಶೇಷ ಕೋಶ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 81

ಹಾಗೂ ಸದಸ್ಯ ಕಾರ್ಯದರ್ಶಿ,

ಡಾ॥ ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರ ಸಮಿತಿ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಇಲಾಖಾ ಮುಂಬಡ್ತಿ ಸಮಿತಿ (ಡಿಪಿಸಿ)ಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿ ಸೇರಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ :**
1. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 05 ಎಸ್‌ಆರ್‌ಸಿ 84 ದಿನಾಂಕ : 05–10–1985.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 266 ಎಂಎಸ್‌ಎಂ 89 ದಿನಾಂಕ : 14–08–1989.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 537 ಪಿಐಎಂ 2004 ದಿನಾಂಕ : 22–11–2004.
4. ಸುತ್ತೋಲೆ ಸಂಖ್ಯೆ : ಸಕಇ 134 ಎಸ್‌ಎಡಿ 2010(4) ದಿನಾಂಕ : 31–08–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಕೃತ ಜ್ಞಾಪನ ಪತ್ರದಲ್ಲಿ ಬಡ್ತಿ ಮುಖಾಂತರ ಹುದ್ದೆಗಳನ್ನು ತುಂಬುವುದಕ್ಕೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಮತ್ತು ಹಿರಿಯ ಶ್ರೇಣಿ ಅಧಿಕಾರಿಗಳಿಗೆ ಬಡ್ತಿ ನೀಡುವ ಸಮಯದಲ್ಲಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ರಚಿಸಲಾಗಿದೆ.

1. ಆಡಳಿತ ಇಲಾಖೆಯ ಕಾರ್ಯದರ್ಶಿಗಳು – ಅಧ್ಯಕ್ಷರು
2. ಇಲಾಖಾ ಮುಖ್ಯಸ್ಥರು – ಸದಸ್ಯರು
3. ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಕಾರ್ಯದರ್ಶಿಗಳು – ಸದಸ್ಯರು

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಹೊರಡಿಸಿದ ಮಾರ್ಗಸೂಚಿಗಳನ್ನು ಆಧಾರವಾಗಿಟ್ಟುಕೊಂಡು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಕಿರಿಯ ಶ್ರೇಣಿ ಅಧಿಕಾರಿಗಳಿಗೆ ಬಡ್ತಿಗಾಗಿ ಪರಿಗಣಿಸಲು ಈ ಕೆಳಕಂಡಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲಾಗಿದೆ.

1. ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ – ಅಧ್ಯಕ್ಷರು
2. ಇಲಾಖಾ ಮುಖ್ಯಸ್ಥರು – ಸದಸ್ಯರು
3. ಉಪಕಾರ್ಯದರ್ಶಿಗಳು, ಆಕುಕ ಇಲಾಖೆ – ಸದಸ್ಯರು

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯದ ಆಡಳಿತವನ್ನು ಸಮರ್ಪಕ ಸಮೀಕರಣಗೊಳಿಸುವ ಅವಶ್ಯಕತೆಯಿರುವುದರಿಂದ ಈ ನಿರ್ದೇಶನಾಲಯದ ಆಡಳಿತಾಧಿಕಾರವನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವ್ಯಾಪ್ತಿಗೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸುತ್ತೋಲೆಯಲ್ಲಿ ಸರ್ಕಾರಿ ಇಲಾಖೆಗಳು ಹಾಗೂ ಸಾರ್ವಜನಿಕ ವಲಯದ ಉದ್ಯಮಗಳು/ಇತರೆ ಸಂಸ್ಥೆಗಳಲ್ಲಿರುವ ವಿವಿಧ ಹುದ್ದೆಗಳನ್ನು ಬಡ್ತಿ ಮುಖಾಂತರ ತುಂಬುವಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಒಬ್ಬ ಅಧಿಕಾರಿಯನ್ನು ಸದಸ್ಯರನ್ನಾಗಿ ನೇಮಿಸುವಂತೆ ಸಮಾಜ ಕಲ್ಯಾಣ ಇಲಾಖೆಯು ಸ್ಪಷ್ಟಪಡಿಸಿದೆ. ಈ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಔಷಧ ನಿಯಂತ್ರಣ ಇಲಾಖೆ ಮತ್ತು ಆಯುಷ್ ಇಲಾಖೆಯ 'ಎ' ವೃಂದದ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬರನ್ನು ಸದಸ್ಯರನ್ನಾಗಿ ನೇಮಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 460 ಪಿಐಎಂ 2010 ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎಸ್.ಸ್ವಾಮಿ, ಸರ್ಕಾರದ ಸಹ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಔಷಧ ನಿಯಂತ್ರಣ ಇಲಾಖೆ ಮತ್ತು ಆಯುಷ್ ಇಲಾಖೆಯ ಅಧಿಕಾರಿಗಳಿಗೆ ಸಂಬಂಧಿಸಿದಂತೆ 'ಎ' ವೃಂದದ ಕಿರಿಯ ಶ್ರೇಣಿ ಅಧಿಕಾರಿಗಳಿಗೆ ಬಡ್ತಿ ನೀಡಲು ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 82

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಪಿ.ಎಂ. ಇಂದುಮತಿ, ವೈದ್ಯರು ದರ್ಜೆ–2 (ಯು) ರವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಆಯುಷ್/51/ಸಿಬ್ಬಂದಿ(4)/ 2010–11, ದಿನಾಂಕ : 07–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದಲ್ಲಿ, ಡಾ: ಪಿ.ಎಂ. ಇಂದುಮತಿ, ವೈದ್ಯರು ದರ್ಜೆ–2 (ಯು), ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇವರನ್ನು ಯುನಾನಿ ವೈದ್ಯಕೀಯ ಪದ್ಧತಿಯಲ್ಲಿ ಸ್ನಾತಕೋತ್ತರ ವ್ಯಾಸಂಗವನ್ನು ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ ಸೇವಾನಿರತ ವೈದ್ಯರ ಕೋಟಾದಡಿಯಲ್ಲಿ 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ "ILM-UL-Advia" ಎಂಬ ವಿಷಯದಲ್ಲಿ ವ್ಯಾಸಂಗ ಮಾಡಲು ಆಯ್ಕೆ ಮಾಡಲಾಗಿದೆ ಎಂದು ತಿಳಿಸುತ್ತಾ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ)(1) ರನ್ವಯ ನಿಗದಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿರುವ ಹಿನ್ನೆಲೆಯಲ್ಲಿ ಮೂರು ವರ್ಷಗಳ ಅವಧಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 442 ಪಿಐಎಂ 2010 ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2010.**

ಡಾ: ಪಿ.ಎಂ. ಇಂದುಮತಿ, ವೈದ್ಯರು ದರ್ಜೆ–2 (ಯು), ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು, ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಕೇಂದ್ರ ಸರ್ಕಾರ ನಾಮನಿರ್ದೇಶನ ಮಾಡಿರುವುದರಿಂದ, 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ "ILM-UL-Advia" ಎಂಬ ವಿಷಯದ ತಜ್ಞತೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ)ನ ನಿಯಮ(1)ರ ಉಪ ನಿಯಮದನ್ವಯ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಡಿಸಿ ಹಾಗೂ ಅವರ ವೇತನವನ್ನು ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿಯೇ ಪಡೆಯುವುದರೊಂದಿಗೆ ಮೂರು ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1. ಅವರು ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2. ಅವರು ವಿದ್ಯಾಭ್ಯಾಸದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಸಿ) ಪ್ರಕಾರ ಕೆಲಸದ ಮೇಲಿದ್ದ ಅವಧಿಯೆಂದು ಪರಿಗಣಿಸುವುದು.
3. ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ) ಮುಂದುವರೆಸುವುದು.
4. ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ–19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು.
5. ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6. ಉನ್ನತ ಶಿಕ್ಷಣಕ್ಕೆ ಪ್ರತಿನಿಯೋಜಿಸಲ್ಪಡುವ ವೈದ್ಯರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.
7. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿನಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.
8. ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.
9. ಕರ್ನಾಟಕ ನಾಗರೀಕ ಸೇವಾ ನಿಯಮಗಳ ಅಪೆಂಡಿಕ್ಸ್–I 'ಎ' ನ ನಿಯಮ 1ರ ಉಪನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.
10. ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ತಗಲುವ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 83

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ನಾಗಭೂಷಣ್ ಎಂ., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಮಾರೇನಹಳ್ಳಿ, ಕೆ.ಆರ್.ಪೇಟೆ ತಾಲ್ಲೂಕು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ(2)82/2010–11 ದಿನಾಂಕ : 11–11–2010.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ನಾಗಭೂಷಣ್ ಎಂ., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಮಾರೇನಹಳ್ಳಿ, ಕೆ.ಆರ್.ಪೇಟೆ ತಾಲ್ಲೂಕು ಇವರು ದಿನಾಂಕ : 01–02–2010 ರಿಂದ ಖಾಯಂ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ : 13–05–2010 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ : 13–05–2010 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 693 ಹೆಚ್‌ಎಸ್‌ಹೆಚ್ 2010 ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ: ನಾಗಾಭೂಷಣ್ ಎಂ., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಮಾರೇನಹಳ್ಳಿ, ಕೆ.ಆರ್.ಪೇಟೆ ತಾಲ್ಲೂಕು ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 13–05–2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 84

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎ.ಆರ್. ಪದ್ಮಜಾ, ವೈದ್ಯರು ದರ್ಜೆ–2 (ಯು) ರವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಆಯುಷ್/32/ಸಿಬ್ಬಂದಿ(4)/ 2010–11, ದಿನಾಂಕ : 06–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರು ಡಾ: ಎ.ಆರ್. ಪದ್ಮಜಾ, ವೈದ್ಯರು ದರ್ಜೆ–2 (ಯು), ಸರ್ಕಾರಿ ಯುನಾನಿ ಆಸ್ಪತ್ರೆ, ರಾಮನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸದರಿಯವರನ್ನು ಯುನಾನಿ ವೈದ್ಯಕೀಯ ಪದ್ಧತಿಯಲ್ಲಿ ಸ್ನಾತಕೋತ್ತರ ವ್ಯಾಸಂಗವನ್ನು ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ ಮಾಡಲು ಸೇವಾನಿರತ ವೈದ್ಯರ ಕೋಟಾದಡಿಯಲ್ಲಿ 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ "ILM-UL-Qablath" ಎಂಬ ವಿಷಯದ ತಜ್ಞತೆಯಲ್ಲಿ ವ್ಯಾಸಂಗ ಮಾಡಲು ಇಚ್ಛಿಸಿದ್ದಾರೆ. ಆದುದರಿಂದ ಸದರಿ ವೈದ್ಯರು ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ)(1) ರನ್ವಯ ನಿಗದಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುತ್ತಾರೆಂದು ತಿಳಿಸಿ, ಮೂರು ವರ್ಷಗಳ ಅವಧಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 436 ಪಿಐಎಂ 2010 ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2010.**

ಡಾ: ಎ.ಆರ್.ಪದ್ಮಜಾ, ವೈದ್ಯರು ದರ್ಜೆ–2 (ಯು), ಸರ್ಕಾರಿ ಯುನಾನಿ ಆಸ್ಪತ್ರೆ, ರಾಮನಗರ ಇವರನ್ನು 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ ಸೇವಾನಿರತ ವೈದ್ಯರ ಕೋಟಾದಡಿಯಲ್ಲಿ "ILM-UL-Qablath" ಎಂಬ ವಿಷಯದಲ್ಲಿ ವ್ಯಾಸಂಗ ಮಾಡಲು ಕೇಂದ್ರ ಸರ್ಕಾರದಿಂದ ನಾಮನಿರ್ದೇಶನವಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ)ನ ನಿಯಮ(1)ರ ಉಪ ನಿಯಮದನ್ವಯ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಡಿಸಿ ಹಾಗೂ ಅವರ ವೇತನವನ್ನು ಸರ್ಕಾರಿ ಯುನಾನಿ ಆಸ್ಪತ್ರೆ, ರಾಮನಗರ ಇಲ್ಲಿಯೇ ಪಡೆಯುವುದರೊಂದಿಗೆ ಮೂರು ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1. ಅವರು ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2. ಅವರು ವಿದ್ಯಾಭ್ಯಾಸದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಸಿ) ಪ್ರಕಾರ ಕೆಲಸದ ಮೇಲಿದ್ದ ಅವಧಿಯೆಂದು ಪರಿಗಣಿಸುವುದು.
3. ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ) ಮುಂದುವರೆಸುವುದು.
4. ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ–19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು.
5. ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6. ಉನ್ನತ ಶಿಕ್ಷಣಕ್ಕೆ ಪ್ರತಿನಿಯೋಜಿಸಲ್ಪಡುವ ವೈದ್ಯರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.
7. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿನಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.
8. ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.
9. ಕರ್ನಾಟಕ ನಾಗರೀಕ ಸೇವಾ ನಿಯಮಗಳ ಅಪೆಂಡಿಕ್ಸ್–1 'ಎ' ನ ನಿಯಮ 1ರ ಉಪನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.
10. ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ತಗುಲಿರುವ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 85

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ಆಕುಕ 201 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ : 20–12–2010.**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳಿಗೆ ಹೆಚ್ಚುವರಿಯಾಗಿ ವಿವಿಧ ಭತ್ಯೆಗಳನ್ನು ಮಂಜೂರು ಮಾಡಿದ ಸರ್ಕಾರಿ ಆದೇಶ ಸಂಖ್ಯೆ : ಆಕುಕ 718 ಹೆಚ್‌ಎಸ್‌ಹೆಚ್ 2008

ದಿನಾಂಕ : 10-12-2009 ರ ಆದೇಶ ಭಾಗದಲ್ಲಿ "ಗ್ರಾಮೀಣ ಭತ್ಯೆ ಹಾಗೂ ಸ್ನಾತಕೋತ್ತರ ಭತ್ಯೆ ಇವುಗಳ ಪೈಕಿ ಯಾವುದಾದರೂ ಒಂದು ಭತ್ಯೆಯನ್ನು ಮಾತ್ರ ಪಡೆಯಲು ವೈದ್ಯರು ಅರ್ಹರಿರುತ್ತಾರೆ" ಎಂಬ ಕಂಡಿಕೆ ನಂತರ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

"ಸದರಿ ಹೆಚ್ಚುವರಿ ಭತ್ಯೆಗಳು ನಿಯೋಜನೆ ಮೇಲೆ ಸ್ವಾಯತ್ತ ಸಂಸ್ಥೆಗಳನ್ನು ಒಳಗೊಂಡಂತೆ ಇತರೆ ಇಲಾಖೆಗಳು/ನಿಗಮ/ಮಂಡಳಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರುಗಳಿಗೆ ಅನ್ವಯಿಸುವುದಿಲ್ಲ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ಸೇವೆಗಳು-1)

ಪಿ. ಆರ್. 86

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಲಯನ್ಸ್ ಕ್ಲಬ್, ಬೆಂಗಳೂರು ವೆಸ್ಟ್ ಟ್ರಸ್ಟ್‌ಗೆ ಸೂಪರ್ ಸ್ಪೆಷಾಲಿಟಿ ಕಣ್ಣಿನ ಆಸ್ಪತ್ರೆ ನಡೆಸುವ ಉದ್ದೇಶಕ್ಕಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಾರ್ಡ್ ಸಂಖ್ಯೆ :118 (ಹಳೆಯ ಸಂಖ್ಯೆ 48) ಹೆಚ್. ಸಿದ್ದಯ್ಯ ರಸ್ತೆಯಲ್ಲಿರುವ ನಗರ ಪಾಲಿಕೆಯ 5778 ಚ.ಅಡಿ ಜಾಗವನ್ನು ಕ್ರಯಕ್ಕೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಂಎ 259 ಎಂಎನ್‌ಜಿ 1975, ದಿನಾಂಕ : 10-12-1975.
2. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಎ3(1) ಪಿಆರ್/127/04-05, ದಿನಾಂಕ : 11-1-2005.
3. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಎ3(1)ಪಿಆರ್/127/02-03, ದಿನಾಂಕ 16-10-2007.
4. ಮ್ಯಾನೇಜಿಂಗ್ ಟ್ರಸ್ಟಿ, ಬೆಂಗಳೂರು ಪಶ್ಚಿಮ ಲಯನ್ಸ್ ಸೂಪರ್ ಸ್ಪೆಷಾಲಿಟಿ ಕಣ್ಣಿನ ಆಸ್ಪತ್ರೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿ ದಿನಾಂಕ : 13-4-2010.
5. ಸರ್ಕಾರದ ಪತ್ರ ಸಂಖ್ಯೆ : ನಅಇ 22 ಎಂಎನ್‌ಜಿ 2005, ದಿನಾಂಕ : 5-6-2010.
6. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ : ಸಅ(ಆಸ್ತಿ)/ಪಿ.ಆರ್./49/2010-11, ದಿನಾಂಕ : 13-7-2010.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ದಿನಾಂಕ : 10-12-1975ರ ಸರ್ಕಾರದ ಆದೇಶದಲ್ಲಿ ಬೆಂಗಳೂರಿನ ಸಿದ್ಧಯ್ಯ ರಸ್ತೆಯಲ್ಲಿರುವ ಆಸ್ತಿ ಸಂಖ್ಯೆ : 5ರ 113+103/2 X 54+53/2 (ಅಂದಾಜು 5778 ಚ.ಅಡಿ) ಅಳತೆಯ ಜಾಗವನ್ನು ಮೆ: ಲಯನ್ಸ್ ಕ್ಲಬ್ ರವರಿಗೆ 35 ವರ್ಷಗಳ ಅವಧಿಗೆ ತಿಂಗಳಿಗೆ ರೂ. 50.00 ರಂತೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿತ್ತು.

2. ಮೇಲೆ (2) ಮತ್ತು (3) ರಲ್ಲಿ ಓದಲಾದ ಬಿ.ಬಿ.ಎಂ.ಪಿ. ಆಯುಕ್ತರ ಪತ್ರಗಳಲ್ಲಿ, ಮೆ: ಲಯನ್ಸ್ ಕ್ಲಬ್ ರವರಿಗೆ ನೀಡಿರುವ ಗುತ್ತಿಗೆ ಅವಧಿಯು ದಿನಾಂಕ : 16-1-2011 ಕ್ಕೆ ಅಂತ್ಯಗೊಳ್ಳುತ್ತದೆ. ಗುತ್ತಿಗೆ ಕರಾರಿನನ್ವಯ ಸಮುದಾಯ ಭವನವನ್ನು ನಿರ್ಮಿಸಲು ಸದರಿ ಜಾಗವನ್ನು ಗುತ್ತಿಗೆದಾರರಿಗೆ ನೀಡಲಾಗಿತ್ತು. ಆದರೆ ಗುತ್ತಿಗೆ ಕರಾರನ್ನು ಉಲ್ಲಂಘಿಸಿ, ಗುತ್ತಿಗೆದಾರರು ಸುಸಜ್ಜಿತ ಕಣ್ಣಾಸ್ಪತ್ರೆ ಮತ್ತು ಕನ್ನಡಕದ ಅಂಗಡಿಯನ್ನು ನಡೆಸುತ್ತಿದ್ದ ಕಾರಣ, ಬಿ.ಬಿ.ಎಂ.ಪಿ.ಯಿಂದ ಗುತ್ತಿಗೆ ಕರಾರನ್ನು ರದ್ದುಗೊಳಿಸಿಲು 1993ರಲ್ಲಿ ನೋಟೀಸನ್ನು ಜಾರಿ ಮಾಡಲಾಗಿತ್ತು. ಇದಕ್ಕೆ ಸಂಸ್ಥೆಯು ಸಮಜಾಯಿಷಿ ನೀಡುತ್ತಾ, ಸಂಸ್ಥೆಯ ವತಿಯಿಂದ ಸುಸಜ್ಜಿತ ಕಣ್ಣಾಸ್ಪತ್ರೆ ನಡೆಸುತ್ತಿದ್ದು, ಯಾವುದೇ ಲಾಭದ ಉದ್ಯಮ ನಡೆಸುತ್ತಿಲ್ಲವಾದ್ದರಿಂದ ಮೇಲ್ಕಂಡ ಜಾಗವನ್ನು ರಿಯಾಯಿತಿ ದರದಲ್ಲಿ ನೀಡುವಂತೆ ಕೋರಿದ್ದು, ಸ್ವತ್ತಿನ ಮಾರ್ಗಸೂಚಿ ಬೆಲೆ ಪ್ರತಿ ಚದರ ಅಡಿಗೆ ರೂ. 1540/- ಕ್ಕೆ ಅಧಿಕ ಮಾರುಕಟ್ಟೆ ಬೆಲೆ ಬಾಬ್ತು ಶೇ. 20 ರಷ್ಟು ಸೇರಿಸಿ, ಪ್ರತಿ ಚದರ ಅಡಿಗೆ ರೂ. 1848/- ಗಳಂತೆ ರೂ. 1,10,67,672/- ಗಳಾಗುತ್ತದೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ನಅಇ 129 ಟಿಎಂಡಿ 2002, ದಿನಾಂಕ : 2-6-2003ರ ಮಾರ್ಗಸೂಚಿಗಳನ್ವಯ ಶೇ 50 ರಂತೆ ಲೆಕ್ಕ ಹಾಕಿದ್ದಲ್ಲಿ ಸ್ವತ್ತಿನ ಬೆಲೆ ರೂ. 55,33,836/-ಗಳಾಗುತ್ತದೆಂದು ತಿಳಿಸುತ್ತಾ, ದಿನಾಂಕ : 22-9-2004 ರಂದು ನಡೆದ ಪಾಲಿಕೆಯ ಸಭೆಯ ವಿಷಯ ಸಂಖ್ಯೆ : 10(99) ರಲ್ಲಿ ಸದರಿ ಸಂಸ್ಥೆಯು ವರಮಾನ ತೆರಿಗೆಯಡಿಯಲ್ಲಿ ಸೇವಾ ಚಟುವಟಿಕೆಗಳ ಕಾರ್ಯದಲ್ಲಿ ನಿರತವಾಗಿರುವ ಕಾರಣ ಮೇಲ್ಕಂಡ ಸ್ವತ್ತನ್ನು ರೂ. 55,33,836/- ಗಳಿಗೆ 10 ವರ್ಷಗಳಲ್ಲಿ ಸಮಾನಾಂತರ ವಾರ್ಷಿಕ ಕಂತುಗಳಲ್ಲಿ ಪಾವತಿಸಿಕೊಳ್ಳುವ ಷರತ್ತಿಗೊಳಪಡಿಸಿ ಕ್ರಯಕ್ಕೆ ನೀಡುವಂತೆ ತೀರ್ಮಾನಿಸಿತ್ತು. ನಂತರ ಪಾಲಿಕೆಯು ದಿನಾಂಕ :29-9-2007ರ ಸಭೆಯಲ್ಲಿ ವಿಷಯ ಸಂಖ್ಯೆ : 164/07-08 ರಲ್ಲಿ ಸದರಿ ಸ್ವತ್ತನ್ನು ಪ್ರತಿ ತಿಂಗಳಿಗೆ ರೂ. 1,17,982/-ಗಳ ಗುತ್ತಿಗೆ ದರವನ್ನು ವಿಧಿಸಿ ದಿನಾಂಕ : 17-1-2011 ರಿಂದ 30 ವರ್ಷಗಳ ಅವಧಿಗೆ ನವೀಕರಿಸಬಹುದೆಂದು ತೀರ್ಮಾನಿಸಿ, ಸದರಿ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡುವಂತೆ ಆಯುಕ್ತರು ಕೋರಿದ್ದರು.

3. ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದ್ದ ಸಂದರ್ಭದಲ್ಲಿ, ಮೇಲೆ (4) ರಲ್ಲಿ ಓದಲಾದ ದಿನಾಂಕ :13-4-2010ರಲ್ಲಿ ಪಶ್ಚಿಮ ಲಯನ್ಸ್ ಸೂಪರ್ ಸ್ಪೆಷ್ಯಾಲಿಟಿ ಕಣ್ಣಿನ ಆಸ್ಪತ್ರೆಯ ಮ್ಯಾನೇಜಿಂಗ್ ಟ್ರಸ್ಟಿರವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ತಮ್ಮ ಸಂಸ್ಥೆಯು ಇದುವರೆಗೂ ಗ್ರಾಮಾಂತರ ಪ್ರದೇಶದ ಒಂದು ಲಕ್ಷಕ್ಕೂ ಹೆಚ್ಚು ಬಡವರಿಗೆ ಐ.ಒ.ಎಲ್ ಕಣ್ಣಿನ ಪೊರೆ (ಕ್ಯಾಟರ್ಯಾಕ್ಟ್) ಶಸ್ತ್ರ ಚಿಕಿತ್ಸೆಯನ್ನು ಯಶಸ್ವಿಯಾಗಿ ನಡೆಸುತ್ತಿರುವುದರಿಂದ, ಸದರಿ ಜಾಗವನ್ನು ಪಾಲಿಕೆಯ ಶಿಫಾರಸ್ಸಿನಂತೆ ರೂ. 55,33,836/-ಗಳ ರಿಯಾಯಿತಿ ಬೆಲೆಗೆ ಶುದ್ಧ ಕ್ರಯಕ್ಕೆ 10 ಸಮಾನಾಂತರ ವಾರ್ಷಿಕ ಕಂತುಗಳಲ್ಲಿ ಪಾವತಿಸಿಕೊಳ್ಳುವ ಷರತ್ತಿಗೊಳಪಟ್ಟು ಮಾರಾಟ ಮಾಡುವಂತೆ ಕೋರಿರುತ್ತಾರೆ.

4. ಏತನ್ಮಧ್ಯೆ, ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ 5-6-2010ರ ಸರ್ಕಾರಿ ಪತ್ರದಲ್ಲಿ ಸದರಿ ನಿವೇಶನದ ಪ್ರಸಕ್ತ ಮಾರುಕಟ್ಟೆ ದರವನ್ನು ತಿಳಿಸುವಂತೆ ಆಯುಕ್ತರನ್ನು ಕೋರಲಾಗಿತ್ತು, ಮೇಲೆ (6) ರಲ್ಲಿ ಓದಲಾದ ದಿನಾಂಕ : 13-7-2010ರ ಪತ್ರದಲ್ಲಿ ಪಾಲಿಕೆಯ ಆಯುಕ್ತರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧಿಸೂಚನೆ ಸಂಖ್ಯೆ : ಸಿವಿಸಿ/ಬಿ.ಯು.ಡಿ./5/2006-07, ದಿನಾಂಕ 17-4-2007 ರನ್ವಯ ಪ್ರಸ್ತುತ, ಸ್ವತ್ತಿಗೆ

ಒಂದು ಚದರಡಿಗೆ ರೂ. 3500.00 ಗಳ ಮಾರುಕಟ್ಟೆ ದರವಾಗಿರುತ್ತದೆ. ಸದರಿ ನಿವೇಶನವು ವಾಣಿಜ್ಯ ನಿವೇಶನವಾಗಿರುವುದರಿಂದ ಸರ್ಕಾರದ ಮಾರ್ಗಸೂಚಿಯಂತೆ ಶೇ 40 ರಷ್ಟು ಹೆಚ್ಚುವರಿ ವಸತೀಯೇತರ ಬಾಬ್ತು ಪರಿಗಣಿಸಲಾಗಿ, ಸ್ವತ್ತಿನ ಬೆಲೆ ಚದರ ಅಡಿ ಒಂದಕ್ಕೆ ರೂ. 4900.00 ಗಳಾಗುತ್ತದೆ. ಸದರಿ ನಿವೇಶನವು ಮೂಲೆ ನಿವೇಶನವಾಗಿರುವುದರಿಂದ ಮಾರುಕಟ್ಟೆ ದರಕ್ಕೆ ಶೇ 10 ರಂತೆ ಹೆಚ್ಚುವರಿ ಸೇರಿಸಿದಲ್ಲಿ, ಚದರ ಅಡಿ ಒಂದಕ್ಕೆ ರೂ. 5390.00 ಗಳಂತೆ 5778 ಚದರ ಅಡಿಗಳಿಗೆ (5778 X 5390) 3,11,43,420.00 ರೂ. ಗಳಾಗುತ್ತದೆಂದು ತಿಳಿಸಿರುತ್ತಾರೆ.

**5.** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರ ಪ್ರಸ್ತಾವನೆಯನ್ನು ಹಾಗೂ ಪಶ್ಚಿಮ ಲಯನ್ಸ್ ಸೂಪರ್ ಸ್ಪೆಷ್ಯಾಲಿಟಿ ಕಣ್ಣಿನ ಆಸ್ಪತ್ರೆಯು ಸಾರ್ವಜನಿಕರಿಗೆ ಸಲ್ಲಿಸುತ್ತಿರುವ ಸೇವೆಯನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 22 ಎಂಎನ್‌ಜೆ 2005, ಬೆಂಗಳೂರು, ದಿನಾಂಕ : 20-11-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಾರ್ಡ್ ಸಂಖ್ಯೆ : 118 (ಹಳೆಯ ಸಂಖ್ಯೆ : 48) ಹೆಚ್. ಸಿದ್ದಯ್ಯ ರಸ್ತೆಯಲ್ಲಿರುವ ಪಾಲಿಕೆಯ ನಿವೇಶನ ಸಂಖ್ಯೆ : 5ರ 113+103/2 X 54+53/2 ಅಂದರೆ, 5778 ಚ.ಅಡಿ ಜಾಗವನ್ನು ಪ್ರಸಕ್ತ ಮಾರುಕಟ್ಟೆ ದರ ರೂ. 3,11,43,420/- ಕ್ಕೆ ಶೇ. 25 ರಷ್ಟನ್ನು ಅಂದರೆ ರೂ. 77,85,855.00 (ಎಪ್ಪತ್ತೇಳು ಲಕ್ಷದ ಎಂಭತ್ತೈದು ಸಾವಿರದ ಎಂಟು ನೂರ ಐವತ್ತೈದು ರೂಪಾಯಿಗಳು ಮಾತ್ರ) ನ್ನು ಒಂದೇ ಕಂತಿನಲ್ಲಿ ಪಾವತಿಸುವಂತೆ ಹಾಗೂ ಸದರಿ ಸ್ವತ್ತಿನಲ್ಲಿ ಸಾರ್ವಜನಿಕರಿಗೆ ಅದರಲ್ಲೂ ಬಡವರಿಗೆ ಕಣ್ಣಿನ ಚಿಕಿತ್ಸೆ ನಡೆಸಲು ಸೂಪರ್ ಸ್ಪೆಷ್ಯಾಲಿಟಿ ಕಣ್ಣಿನ ಆಸ್ಪತ್ರೆಯನ್ನು ಮಾತ್ರ ನಡೆಸುವ ಷರತ್ತಿಗೊಳಪಟ್ಟು ಲಯನ್ಸ್ ಕ್ಲಬ್, ಬೆಂಗಳೂರು ವೆಸ್ಟ್ ಟ್ರಸ್ಟ್‌ಗೆ ಕ್ರಯಕ್ಕೆ ನೀಡಲು ಸರ್ಕಾರದ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ಪಿ. ಆರ್. 87

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** ಬೈಫ್ ಸಂಸ್ಥೆಯ ವತಿಯಿಂದ ರಾಜ್ಯದಲ್ಲಿ ಹೊಸ ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ : 5-7-2008 ರಂದು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ SLRC ಸಭೆಯ ನಡವಳಿ.
2. ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ : ಆಇ 892 ವೆಚ್ಚ 12/10, ದಿನಾಂಕ : 21-10-2010.

**ಪ್ರಸ್ತಾವನೆ :**

ದಿನಾಂಕ : 5-7-2008 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಮಟ್ಟದ ಪರಿಶೀಲನಾ ಸಮಿತಿಯ (SLRC) ಸಭೆಯಲ್ಲಿ ರಾಜ್ಯದಲ್ಲಿ ಬೈಫ್ ಸಂಸ್ಥೆಯ ವತಿಯಿಂದ 100 ಹೆಚ್ಚುವರಿ ಹೊಸ ಕೃತಕ ಗರ್ಭಧಾರಣಾ ಕೇಂದ್ರಗಳನ್ನು ತೆರೆಯುವ ಬಗ್ಗೆ ತೀರ್ಮಾನಕೈಗೊಳ್ಳಲಾಗಿದೆ. ಇದರಂತೆ, ದಾವಣಗೆರೆ, ಧಾರವಾಡ, ಬಿಜಾಪುರ, ತುಮಕೂರು, ಚಾಮರಾಜನಗರ, ಚಿಕ್ಕಮಗಳೂರು, ಉತ್ತರಕನ್ನಡ ಮತ್ತು ಮೈಸೂರು ಜಿಲ್ಲಾ ಪಂಚಾಯತ್‌ಗಳಿಂದ ಒಟ್ಟು 31 ಹೊಸ ಕೃತಕ ಗರ್ಭಧಾರಣಾ ಕೇಂದ್ರಗಳನ್ನು ತೆರೆಯುವ ಬಗ್ಗೆ ಪ್ರಸ್ತಾವನೆ ಬಂದಿರುತ್ತದೆ. ಈ ಬಗ್ಗೆ ಓದಲಾಗಿದೆ (2) ರ ಅಧಿಸೂಚನೆಯಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999ರ ಕಲಂ 4 (ಜಿ) ರಡಿ ಬೈಫ್ ಸಂಸ್ಥೆಗೆ ವಿನಾಯಿತಿ ನೀಡಲಾಗಿದೆ. ಅಂತಯೇ, ಸದರಿ ಕೇಂದ್ರಗಳನ್ನು ತೆರೆಯುವ ಬಗ್ಗೆ ಬೈಫ್ ಸಂಸ್ಥೆಗೆ ಆದೇಶ ನೀಡಬೇಕಾಗಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 46 ಎಸ್‌ಜಿವೈ (ಇನ್ ಪ್ರಾ) 2009, ಬೆಂಗಳೂರು, ದಿನಾಂಕ : 16-12-2010**

ರಾಜ್ಯದಲ್ಲಿನ ಈ ಕೆಳಕಂಡ 8 ಜಿಲ್ಲೆಗಳಲ್ಲಿ ಒಟ್ಟು 31 ಹೊಸ ಕೃತಕ ಗರ್ಭದಾರಣಾ ಕೇಂದ್ರಗಳನ್ನು ಬೈಫ್ ಸಂಸ್ಥೆಯು ತೆರೆಯುವ ಬಗ್ಗೆ ಹಾಗೂ 2011-12 ನೇ ಸಾಲಿಗೆ NRLM ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವುದರಿಂದ, ಈ ಯೋಜನೆಗೆ ಸಂಬಂಧಪಟ್ಟಂತೆ, ಮೇಲ್ಕಂಡ ಬೈಫ್ ಕೇಂದ್ರಗಳನ್ನು ತೆರೆಯಲು ಇಲಾಖೆಯು ತೆಗೆದುಕೊಳ್ಳುವ ನಿರ್ಧಾರಕ್ಕೆ ಬದ್ಧರಾಗಿ, ಅನುಮೋದನೆಯನ್ನು ಬೈಫ್ ಸಂಸ್ಥೆಗೆ ಸರ್ಕಾರವು ಮಂಜೂರಾತಿ ನೀಡಲಾಗಿದೆ.

ಪ್ರತಿಯೊಂದು ಕೇಂದ್ರದ ನಿರ್ವಹಣಾ ವೆಚ್ಚ ರೂ. 1,87,500/- ಗಳನ್ನು ಹಾಗೂ ಪ್ರತಿ ವರ್ಷ ಶೇಕಡಾ 5 ರಷ್ಟು ಏರು ಬೆಲೆ ಹೆಚ್ಚಿಸಿರುವುದಕ್ಕೂ ಸಹ ಸರ್ಕಾರವು ಮಂಜೂರಾತಿ ನೀಡಿದೆ.

ಬಡತನ ರೇಖೆಗೆ ಒಳಪಡುವ ಫಲಾನುಭವಿಗಳಿಂದ ರೂ. 15/- ಮತ್ತು ಬಡತನ ರೇಖೆಗೆ ಒಳಪಡದೇ ಇರುವ ಫಲಾನುಭವಿಗಳಿಂದ ರೂ. 25/- ಗಳ ಸೇವಾ ವೆಚ್ಚವನ್ನು ವಸೂಲಿ ಮಾಡಿ ಸಂಬಂಧಪಟ್ಟ ಜಿಲ್ಲೆಗಳ ಪಶು ಸಂಗೋಪನಾ ಇಲಾಖೆಯ ಉಪ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಜಮಾ ಮಾಡಬೇಕಾಗಿರುತ್ತದೆ. ಬೈಫ್ ಕೇಂದ್ರಗಳು ನಕಲಿಯಾಗದಂತೆ ಎಚ್ಚರ ವಹಿಸಲು ಸೂಚಿಸಿದೆ.

ಸದರಿ ಕೇಂದ್ರಗಳಿಗೆ ಹಣ ಬಿಡುಗಡೆ ಮಾಡುವ ಮುನ್ನ ಯೋಜನಾ ನಿರ್ದೇಶಕರು, ಡಿಆರ್‌ಡಿಎ ರವರು ಖುದ್ದಾಗಿ ಬೈಫ್ ಕೇಂದ್ರಗಳಿಗೆ ಭೇಟಿ ನೀಡಿ ಪ್ರಗತಿ ಪರಿಶೀಲಿಸಿ ನಂತರ ಹಣ ಬಿಡುಗಡೆ ಮಾಡತಕ್ಕದ್ದು.

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು | ಗ್ರಾಮ | ಒಟ್ಟು ಕೇಂದ್ರಗಳು |
|---|---|---|---|---|
| 1 | ದಾವಣಗೆರೆ | ಹರಪನ ಹಳ್ಳಿ | ಕಡತಿ, ಕಲ್ಲಹಳ್ಳಿ, ಜಂಗಮ ತುಂಬಿಗೆರೆ, ಬೆಂಡಿಗೆರೆ | 8 |
| | | ಚನ್ನಗಿರಿ | ತುರುವೆಗೆರೆ, ನುಗ್ಗೇನಹಳ್ಳಿ, ಗುಡ್ಡದ ನಾಯಕನ ಹಳ್ಳಿ, ತರಗನ ಹಳ್ಳಿ | |
| | | ಹೊನ್ನಾಳಿ | | |

| | | | | |
|---|---|---|---|---|
| 2 | ಧಾರವಾಡ | ಧಾರವಾಡ | ಸಿಂಗನ ಹಳ್ಳಿ, ಕಲ್ಲೂರು | 3 |
| | | ನವಲಗುಂದ | ಗುಡಿಸಾಗರ | |
| 3 | ಬಿಜಾಪುರ | ಬಿಜಾಪುರ | ಕತ್ನಳ್ಳಿ, ದೇವರಗೆಣ್ಣೂರ, ಅಲಿಯಾಬಾದ್, ಕುಮಠೆ | |
| | | ಇಂಡಿ | ಹಡಲಸಂಗ, ದೇವರ ನಿಂಬರಗಿ, | 8 |
| | | ಸಿಂದಗಿ | ಗಬಸಾವಳಗಿ | |
| | | ಮುದ್ದೇಬಿಹಾಳ | ಹುಲ್ಲೂರ | |
| 4 | ತುಮಕೂರು | ಚಿಕ್ಕನಾಯಕನ ಹಳ್ಳಿ | ರಾಮಘಟ್ಟ, ಗೋಪಾಲಪುರ | |
| | | ಮಧುಗಿರಿ | ಡಿ.ವಿ. ಹಳ್ಳಿ, ಸುದ್ದಕುಂಟೆ | 4 |
| 5 | ಚಾಮರಾಜನಗರ | ಕೊಳ್ಳೇಗಾಲ | ಪಿ.ಜಿ. ಪಾಳ್ಯ, ನಾಗನತ್ತ | 2 |
| 6 | ಚಿಕ್ಕಮಗಳೂರು | ತರೀಕೆರೆ | ಮುಂಡ್ರೆ | 1 |
| 7 | ಉತ್ತರ ಕನ್ನಡ | ಹಳಿಯಾಳ | ಹಳಿಯಾಳ | |
| | | ಭಟ್ಕಳ | ಭಟ್ಕಳ | 3 |
| | | ಸಿದ್ದಾಪುರ | ಕಂಚಿಕೈ | |
| 8 | ಮೈಸೂರು | ಹೆಚ್.ಡಿ. ಕೋಟೆ | ದಡದಹಳ್ಳಿ | |
| | | ಟಿ. ನರಸೀಪುರ | ಹೆಮ್ಮಿಗೆ | 2 |
| | | ಒಟ್ಟು | | 31 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಪಿ.ಎ. ಮೇಘಣ್ಣವರ
ನಿರ್ದೇಶಕರು (ಸ್ವಉಕಾ)
ಹಾಗೂ ಪ/ನಿ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

ಪಿ. ಆರ್. 88

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ : 19–8–2010.
2. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಶಾಖೆಗಳ ಮನವಿ.
3. ದಿನಾಂಕ : 12–10–2010ರ ಸರ್ಕಾರದ ಪತ್ರ : ಕಸಂವಾಪ್ರ 115 ಸ್ವೀಮರ 2010.
4. ದಿನಾಂಕ : 14–10–2010 ರ ರವಿ ಏಜೇನ್ಸೀಸ್‌ರವರ ಪತ್ರ ಸಂಖ್ಯೆ : ಆರ್.ಎ. 1411/ಕೆ.ಸಿ./10.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಮನವಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ವಿವಿಧ ಶಾಖೆಗಳು ಲೇಖನ ಸಾಮಗ್ರಿಗಳಿಗಾಗಿ ಮನವಿ ಸಲ್ಲಿಸಿದ್ದೆವು.

ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಖರೀದಿಸಲು 03 ಕಂಪನಿಗಳಿಂದ ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಇಲಾಖೆಗೆ ಅಗತ್ಯವಾಗಿ ಬೇಕಾಗುವ ಸಾಮಗ್ರಿಗಳ ಒಟ್ಟು ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ 3 ಕಂಪನಿಗಳ ಲೇಖನ ಸಾಮಗ್ರಿಗಳ ದರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ರವಿ ಏಜೆನ್ಸೀಸ್ | ಲೇಖನ ಸಾಮಗ್ರಿಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 34,892–10 |
| 2 | ಸನ್‌ಟೆಕ್ ಸ್ಟೇಷನರೀಸ್ | ಲೇಖನ ಸಾಮಗ್ರಿಗಳು | | | 36,338–90 |
| 3 | ಶಂಕರ್ ಪೇಪರ್ ಮಾರ್ಟ್ | ಲೇಖನ ಸಾಮಗ್ರಿಗಳು | | | 36,298–38 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಅವಿನ್ಯೂ ರಸ್ತೆಯಲ್ಲಿರುವ ರವಿ ಏಜೆನ್ಸೀಸ್, # 448, ಬೆಂಗಳೂರು–560001 ರವರಿಗೆ ರೂ. 34,892/– ಗಳ (ಮೂವತ್ತನಾಲ್ಕು ಸಾವಿರದ ಎಂಟು ನೂರ ತೊಂಬತ್ತೆರಡು ರೂ.ಗಳು ಮಾತ್ರ) ವೆಚ್ಚದಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯ ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 115 ಸ್ವೀಮರ 2010, ಬೆಂಗಳೂರು, ದಿನಾಂಕ : 20–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಎಲ್ಲಾ ಶಾಖೆಗಳಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಲೇಖನ ಸಾಮಗ್ರಿಗಳಿಗೆ ಅತಿ ಕಡಿಮೆ

ದರ ರೂ. 34,892–00 (ಮೂವತ್ತನಾಲ್ಕು ಸಾವಿರದ ಎಂಟು ನೂರ ತೊಂಬತ್ತೆರಡು ರೂ.ಗಳು ಮಾತ್ರ) ಗಳನ್ನು ಸೂಚಿಸಿರುವ ಬೆಂಗಳೂರಿನ ಅವಿನ್ಯೂ ರಸ್ತೆಯ # 448, ರವಿ ಏಜೆನ್ಸೀಸ್‌ರವರಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ : ಸಿಆಸುಇ 4 ಡಿಎಸ್‌ವೈ 2010 ದಿನಾಂಕ : 19–8–2010ರಲ್ಲಿ ನೀಡಿರುವ ಆದೇಶದನ್ವಯ ಭರಿಸಲು ರವಿ ಏಜೆನ್ಸೀಸ್ ಕಂಪನಿಗೆ ರೂ. 34,892–00 ಗಳ (ಮೂವತ್ತನಾಲ್ಕು ಸಾವಿರದ ಎಂಟು ನೂರ ತೊಂಬತ್ತೆರಡು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ರವಿ ಏಜೆನ್ಸೀಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಕೂಡಲೇ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

**ದಿನಾಂಕ 20–12–2010ರ ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 115 ಸ್ವೀಮರ 2010ಕ್ಕೆ ಅನುಬಂಧ**

**ತುಲನಾತ್ಮಕ ಪಟ್ಟಿ**

| ಕ್ರಮ ಸಂಖ್ಯೆ | ಲೇಖನ ಸಾಮಗ್ರಿಗಳ ವಿವರಗಳು | ಪ್ರಮಾಣ (Qty) | ರವಿ ಏಜೆನ್ಸೀಸ್ | ಸನ್‌ಟೆಕ್ ಸ್ಟೇಷನರೀಸ್ ಪ್ರೈವೇಟ್ ಲಿಮಿಟೆಡ್ | ಶಂಕರ್ ಪೇಪರ್ ಮಾರ್ಟ್ |
|---|---|---|---|---|---|
| 1 | ಜೆರಾಕ್ಸ್ ಪೇಪರ್ (ಎ4) | 40 | 6384–00 | 6636–00 | 6864–00 |
| 2 | ಟಿ.ವಿ.ಎಸ್. ರಿಬ್ಬನ್ | 02 | 352–80 | 363–30 | 363–30 |
| 3 | ಫ್ಯಾಕ್ಸ್ ರೋಲ್ | 50 | 4147–50 | 4462–50 | 4410–00 |
| | ಜೆರಾಕ್ಸ್ ಮಿಷಿನ್ ಟೋನರ್ಸ್ | | | | |
| | ಅ) ವರ್ಕ್ಸ್ ಸೆಂಟರ್ 5020 | 01 | 2326–75 | 2440–25 | 2383–50 |
| 4 | ಆ) ಮೋದಿ ಟೋನರ್ 1025/1038, 5216/5223 | 02 | 1316–60 | 1339–30 | 1327–95 |
| 5 | ಇ) ರೀಕೋ 4621 ಪ್ರಿಂಟರ್ ಕಾಟ್ರೇಜ್ | 01 | 3036–12 | 3149–62 | 3075–85 |
| | ಸ್ಯಾಮಸಂಗ್ ಎಮ್ ಎಲ್ 1640 | 04 | 15330–00 | 15750–00 | 15750–00 |
| 6 | ಬಾಕ್ಸ್ ಫೈಲ್ ಲಿವರ್ | 04 | 281–48 | 396–15 | 295–10 |
| 7 | ಪೆನ್ ಡ್ರೈವ್ | 01 | 682–50 | 687–75 | 714–00 |
| 8 | ಸಿಂಗಲ್ ಪಂಚ್ | 04 | 204–30 | 236–08 | 222–66 |
| 9 | ಕವರ್ಸ್ ಎ3 | 50 | 262–50 | 288–75 | 288–75 |
| 10 | ಕಾಲಿಂಗ್ ಬೆಲ್ | 01 | 397–25 | 408–60 | 414–27 |
| 11 | ಸೆಲೋ ಟೇಪ್ ಚಿಕ್ಕದು | 02 | 31–50 | 33–60 | 39–90 |
| 12 | ಸೆಲೋ ಟೇಪ್ ದೊಡ್ಡದು | 02 | 60–80 | 63–00 | 60–90 |
| 13 | ಸ್ಟಿಕ್ ಅನ್ ಹಳದಿ ಪೇಪರ್ಸ್ ಚಿಕ್ಕದು | 02 | 78–00 | 84–00 | 88–20 |
| | | | 34892–10 | 36338–90 | 36298–38 |

ರವಿ ಏಜೆನ್ಸೀಸ್ – 34892–10
ಸನ್‌ಟೆಕ್ ಸ್ಟೇಷನರೀಸ್ ಪ್ರೈವೇಟ್ ಲಿಮಿಟೆಡ್ – 36338–90
ಶಂಕರ್ ಪೇಪರ್ ಮಾರ್ಟ್ – 36298–38

**ಎಂ.ಕೆ. ಭರ್ಮರಾಜಪ್ಪ**
ಪಿ. ಆರ್. 89
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಕಸಂವಾಪ್ರ 560 ಕಸಧ 2010, ಬೆಂಗಳೂರು, ದಿನಾಂಕ : 20–12–2010**

**ವಿಷಯ :** ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರನ್ನು ಉತ್ಸವಗಳ ಕಾರ್ಯಕಾರಿ ಸಮಿತಿಗಳ ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸುವ ಕುರಿತು

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ರಾಜ್ಯಾದ್ಯಂತ ಉತ್ಸವಗಳನ್ನು ಆಚರಿಸಲಾಗುತ್ತಿದೆ. ಇವುಗಳಲ್ಲಿ ಪ್ರತಿಷ್ಠಿತ ಬೃಹತ್ ಉತ್ಸವಗಳಾದ ದಸರಾ ಉತ್ಸವ, ಹಂಪಿ ಉತ್ಸವ ಹಾಗೂ ಕದಂಬೋತ್ಸವಗಳ ಜೊತೆಗೆ ಹೊಯ್ಸಳ ಉತ್ಸವ, ಚಾಲುಕ್ಯ ಉತ್ಸವ, ಲಕ್ಕುಂಡಿ ಉತ್ಸವ, ಕಿತ್ತೂರು ಉತ್ಸವ, ಧಾರವಾಡ ಉತ್ಸವ, ಬಸವ ಉತ್ಸವ, ಕನಕಗಿರಿ, ಆನೆಗುಂದಿ ಹಾಗೂ ಇತರ ಜಿಲ್ಲಾ ಉತ್ಸವಗಳನ್ನು ಆಚರಿಸಲಾಗುತ್ತಿದ್ದು, ಈ ಉತ್ಸವಗಳಿಗೆ ಅನುದಾನವನ್ನು ಸಹ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ನೀಡಲಾಗುತ್ತಿದೆ. ಈ ಉತ್ಸವಗಳನ್ನು ಆಚರಿಸಲು ಸಂಬಂಧಿಸಿದ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗುವುದು. ಈ ಉತ್ಸವಗಳಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಿಲ್ಲಾ ಸಹಾಯಕ ನಿರ್ದೇಶಕರುಗಳನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸಲು ಉದ್ದೇಶಿಸಲಾಗಿದೆ.

ಅದರಂತೆ ರಾಜ್ಯದಲ್ಲಿ ಕನ್ನಡ ಮತ್ತು ಸಂಸ್ಕೃತಿಯ ಇಲಾಖೆಯ ಅನುದಾನದೊಂದಿಗೆ ನಡೆಯುವ ಹಂಪಿ ಉತ್ಸವ ಹಾಗೂ ಕದಂಬೋತ್ಸವ, ಹೊಯ್ಸಳ ಉತ್ಸವ, ಚಾಲುಕ್ಯ ಉತ್ಸವ, ಲಕ್ಕುಂಡಿ ಉತ್ಸವ, ಕಿತ್ತೂರು ಉತ್ಸವ, ಧಾರವಾಡ ಉತ್ಸವ, ಬಸವ ಉತ್ಸವ, ಕನಕಗಿರಿ, ಆನೆಗುಂದಿ ಹಾಗೂ ಇತರ ಜಿಲ್ಲಾ ಉತ್ಸವಗಳ ಆಚರಣೆಯ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಕಾರ್ಯಕಾರಿ ಸಮಿತಿಗಳಿಗೆ ಆಯಾ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರುಗಳನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸಿಕೊಳ್ಳತಕ್ಕದ್ದು.

**ಹೆಚ್.ವಿ. ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

ಪಿ. ಆರ್. 90

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಹಾಗೂ ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗೆ ಸಂಚಿತ ವೇತನದ ಆಧಾರದ ಮೇಲೆ ಬಾಹ್ಯ ಮೂಲದ ಮೂಲಕ ನೇಮಕಾತಿ ಮಾಡಿಕೊಳ್ಳುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 95 ಕೆಎಂಯು 2004, ದಿನಾಂಕ 26–08–2004.
2. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 219 ಕೆಎಂಯು 2005, ದಿನಾಂಕ 29–10–2005.
3. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ : ಆಪ್ರಾಸಂಪ ನೇಮಕಾತಿ 2005–06, ದಿನಾಂಕ 07–02–2006.
4. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ದಿನಾಂಕ 02–12–2010 ರಂದು ಕೊನೆಗೊಂಡ ಪತ್ರ ಸಂಖ್ಯೆ : ಆಪ್ರಾಸಂಪ ಇಎಸ್‌ಟಿ ನ.ವಿ.ತ & ವಾ.ಶಿ.ಸಂ. 2010–11/481.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಾಗಿ ತಲಾ ಒಬ್ಬರು ಅಭ್ಯರ್ಥಿಗಳನ್ನು ಬಾಹ್ಯ ಮೂಲದಿಂದ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿತ್ತು. ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಈ ಎರಡೂ ಹುದ್ದೆಗಳನ್ನು ಆಯ್ಕೆ ಮಾಡಿ ಭರ್ತಿ ಮಾಡಿಕೊಳ್ಳಲು ಸಮಿತಿಯನ್ನು ರಚಿಸಿ ಆದೇಶಿಸಲಾಗಿತ್ತು. ಈ ಆದೇಶಗಳನ್ವಯ ಮೇಲೆ ಓದಲಾದ (3)ರ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳ ಮತ್ತು ಪರಂಪರೆ ಇಲಾಖೆ ರವರ ಪ್ರಸ್ತಾವನೆಯಲ್ಲಿ ಅಧ್ಯಕ್ಷರು ಹಾಗೂ ಸದಸ್ಯರನ್ನೊಳಗೊಂಡಂತೆ ರಚಿಸಲಾದ ಆಯ್ಕೆ ಸಮಿತಿಯು ದಿನಾಂಕ 30–01–2006 ರಂದು ವಾಸ್ತುಶಿಲ್ಪ ಮತ್ತು ನಗರ ವಿನ್ಯಾಸಕರ ಹುದ್ದೆಗಾಗಿ ಸಂದರ್ಶನವನ್ನು ಏರ್ಪಡಿಸಿದ್ದು, ಸಂದರ್ಶನದಲ್ಲಿ ಸದರಿ ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದ ಅಭ್ಯರ್ಥಿಗಳ ಪೈಕಿ ಶ್ರೀ ಹೆಚ್.ಡಿ. ನಾಗೇಶ್, ಮೈಸೂರು ಇವರು ನಗರ ವಿನ್ಯಾಸಕರ ಹುದ್ದೆಗಾಗಿ ಹಾಗೂ ಶ್ರೀ ಜಿ.ಎಸ್.ವಿ. ಸೂರ್ಯನಾರಾಯಣ ಮೂರ್ತಿ ಇವರು ವಾಸ್ತುಶಿಲ್ಪಿ ಹುದ್ದೆಗೆ ಅರ್ಹ ಅಭ್ಯರ್ಥಿಗಳೆಂದು ಪರಿಗಣಿಸಿ ಆಯ್ಕೆ ಸಮಿತಿಯು ಆಯ್ಕೆ ಮಾಡಲಾಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ಷರತ್ತುಗಳೊಂದಿಗೆ ನೇಮಕಾತಿ ಆದೇಶ ನೀಡಲು ಅನುಮೋದನೆ ನೀಡಬೇಕೆಂದು ಕೋರಿದ್ದರ ಹಿನ್ನೆಲೆಯಲ್ಲಿ ದಿನಾಂಕ 19–01–2007ರ ಆದೇಶವನ್ನು ಹೊರಡಿಸಲಾಗಿದೆ.

ಸದರಿ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಳಲ್ಲಿ ನೇಮಕಾತಿ ಹೊಂದಿ ಕರ್ತವ್ಯ ನಿರ್ವಹಿಸುತ್ತಿದ್ದ ಅಭ್ಯರ್ಥಿಗಳು ತಮ್ಮ ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಿ ಹೋಗಿರುವುದರಿಂದ ಸದರಿ ಹುದ್ದೆಗಳಲ್ಲಿ ಪ್ರಸ್ತುತ ಯಾರೂ ಕೆಲಸ ನಿರ್ವಹಿಸುತ್ತಿಲ್ಲವೆಂದು ತಿಳಿಸಿ ಮತ್ತು 13ನೇ ಹಣಕಾಸು ಯೋಜನೆಯಡಿ ಸಂರಕ್ಷಣಾ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುವುದರಿಂದ ಸದರಿ ಹುದ್ದೆಗಳನ್ನು ಮುಂದುವರೆಸಿ ಅವುಗಳನ್ನು ಭರ್ತಿ ಮಾಡುವುದು ಮತ್ತು ಈ ಮೊದಲು ನೀಡುತ್ತಿದ್ದ ಮಾಸಿಕ ಸಂಚಿತ ವೇತನವನ್ನು ರೂ.16,000/– ಗಳಿಂದ ರೂ.25,000/– ಗಳಿಗೆ ಹೆಚ್ಚಿಸಿ ಆದೇಶಿಸಬೇಕೆಂದು ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರು ಮೇಲೆ ಓದಲಾದ (4)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 228 ಕೆಎಂಯು 2010, ಬೆಂಗಳೂರು, ದಿನಾಂಕ : 15–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಸಂಕಇ 31 ಕೆಎಂಯು 2006, ದಿನಾಂಕ 19–01–2007 ರಲ್ಲಿ 1 ವರ್ಷದ ಅವಧಿಗೆ ಸೃಜಿಸಲಾಗಿರುವ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಳನ್ನು ದಿನಾಂಕ 19–01–2008 ರಿಂದ ಮೂರು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

ಪಿ.ಆರ್. 91

## ವಸತಿ ಸಚಿವಾಲಯ

### ತಿದ್ದುಪಡಿ

**ಸಂ. ವಇ/40/ಹೆಚ್‌ಎಹೆಚ್/2010, ಬೆಂಗಳೂರು, ದಿನಾಂಕ 15ನೇ ಡಿಸೆಂಬರ್ 2010**

**ವಿಷಯ :** "ನನ್ನ ಮನೆ" – ಧಾರಣೀಯ ಗೃಹ ನಿರ್ಮಾಣ ಯೋಜನೆ (Affordable Housing Scheme) ಅಡಿಯಲ್ಲಿ ಏಳು ನಗರ/ಪಟ್ಟಣ ಪ್ರದೇಶಗಳಲ್ಲಿ ವಿವಿಧ ವಿಸ್ತೀರ್ಣದ ಮನೆಗಳನ್ನು ನಿರ್ಮಿಸಿ ಹಂಚುವ ಬಗ್ಗೆ.

**ಉಲ್ಲೇಖ :** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂಖ್ಯೆ : ಎಂಡಿ ಆರ್‌ಜಿಆರ್‌ಹೆಚ್‌ಸಿಎಲ್ 02 ಎನ್‌ಎಂಹೆಚ್‌ಎಸ್ 11 2010, ದಿನಾಂಕ 4–12–2010.

ಸರ್ಕಾರದ ಆದೇಶ ಸಂಖ್ಯೆ ವಇ 40 ಹೆಚ್‌ಎಹೆಚ್ 2010, ದಿನಾಂಕ 2–12–2010 ರಲ್ಲಿನ ಆದೇಶ ಭಾಗದಲ್ಲಿನ **"ಸಂಪದ"** ಯೋಜನೆಯಡಿ "4.73 ಲಕ್ಷ ರೂ.ಗಳ" ಬದಲಾಗಿ "4.75 ಲಕ್ಷ ರೂ.ಗಳು" ಎಂದು ಮತ್ತು **"ಯಶಸ್ಸು"** ಯೋಜನೆಯಡಿ "5.17 ಲಕ್ಷ ರೂ.ಗಳ" ಬದಲಾಗಿ "5.20 ಲಕ್ಷ ರೂ.ಗಳು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್. ವಲ್ಲೂರ,**
ಪೀಠಾಧಿಕಾರಿ–2,
ವಸತಿ ಇಲಾಖೆ.

ಪಿ.ಆರ್. 92

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ದಿನಾಂಕ 12–03–2010.

2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಪತ್ರ ಸಂಖ್ಯೆ : ಮುಮಕಾ/7118/ 2010, ದಿನಾಂಕ 01–12–2010.

**ಪ್ರಸ್ತಾವನೆ :**

ಕಳೆದ ವರ್ಷ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡವರಿಗೆ **"ಆಸರೆ"** ಯೋಜನೆಯಡಿಯಲ್ಲಿ ಸರ್ಕಾರಿ ಸಂಸ್ಥೆಗಳಿಂದ ಮತ್ತು ದಾನಿಗಳಿಂದ ಮನೆಗಳನ್ನು ನಿರ್ಮಿಸಲಾಗುತ್ತಿದೆ. ರಾಯಚೂರು ಜಿಲ್ಲೆಯ ರಾಯಚೂರು ತಾಲ್ಲೂಕಿನ ಹೆಗ್ಗಸನಹಳ್ಳಿ, ಚಿಕ್ಕಸೂಗೂರು ಹಾಗೂ ವಡ್ಲೂರು ಗ್ರಾಮಗಳನ್ನು ಭಾಗಶಃ ಸ್ಥಳಾಂತರಿಸಿ 40 ಎಕರೆ ಜಮೀನಿನಲ್ಲಿ 600 ಆಸರೆ ಮನೆಗಳನ್ನು ನಿರ್ಮಿಸಲು ದಾನಿಗಳು ಲಭ್ಯವಿಲ್ಲದ ಕಾರಣ, ಮನೆಗಳ ನಿರ್ಮಾಣ ಹಂಚಿಕೆಯನ್ನು ಬದಲಾಯಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ : 15–12–2010**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಯಚೂರು ಜಿಲ್ಲೆಯ ರಾಯಚೂರು ತಾಲ್ಲೂಕಿನ ಹೆಗ್ಗಸನಹಳ್ಳಿ, ಚಿಕ್ಕಸೂಗೂರು ಹಾಗೂ ವಡ್ಲೂರು ಗ್ರಾಮಗಳನ್ನು ಭಾಗಶಃ ಸ್ಥಳಾಂತರಿಸಿ 40 ಎಕರೆ ಜಮೀನಿನಲ್ಲಿ 600 ಆಸರೆ ಮನೆಗಳನ್ನು ನಿರ್ಮಿಸಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತಕ್ಕೆ ಹಂಚಿಕೆ ಮಾಡಿ ನಿಗಮದ ಅಧೀನದಲ್ಲಿರುವ ಕ್ಯಾಷೂಟೆಕ್ (ನಿರ್ಮಿತಿ ಕೇಂದ್ರ) ರಾಯಚೂರು ಇವರ ಮುಖಾಂತರ ನಿರ್ಮಾಣ ಕಾರ್ಯ ಕೈಗೊಳ್ಳಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್. ವಲ್ಲೂರ,**
ಪೀಠಾಧಿಕಾರಿ–2,
ವಸತಿ ಇಲಾಖೆ.

ಪಿ.ಆರ್. 93

## ಆರ್ಥಿಕ ಸಚಿವಾಲಯ

**ವಿಷಯ :** 2011–2012ರ ಸಾಲಿನ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು ನಿಯತಗೊಳಿಸುವ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ 01–01–2011 ರಿಂದ ದಿನಾಂಕ 31–12–2012 ರವರೆಗಿನ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯ ಪಡೆಯುವುದನ್ನು ನಿಯತಗೊಳಿಸುವುದು ಅವಶ್ಯಕವೆಂದು ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 5 ಸೇನಿಸೇ 2010, ಬೆಂಗಳೂರು, ದಿನಾಂಕ : 13–12–2010**

2011–2012ರ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಣ ಮಾಡಿ ನಗದೀಕರಣ ಸೌಲಭ್ಯ ಪಡೆಯುವ ಯೋಜನೆಯನ್ನು ದಿನಾಂಕ 01–05–2011 ರಿಂದ ಜಾರಿಗೊಳಿಸಿ ಈ ಕೆಳಕಂಡಂತೆ ನಿಯತಗೊಳಿಸಲಾಗಿದೆ.

2. 2011–2012ರ ಎರಡು ವರ್ಷಗಳ ಬ್ಲಾಕ್ ಅವಧಿಗೆ ತಮ್ಮ ಗಳಿಕೆಯ ರಜೆಯನ್ನು ಅಧ್ಯರ್ಪಿಸಿ ಅದಕ್ಕೆ ಬದಲಾಗಿ ನಗದನ್ನು ಪಡೆಯಲಿಚ್ಛಿಸುವ ಈ ಕೆಳಕಂಡ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ನೌಕರರು, ಅವರು ಅರ್ಜಿ ಸಲ್ಲಿಸಿದ ದಿನಾಂಕದಿಂದ ಒಂದು ತಿಂಗಳ ತರುವಾಯ ಅಥವಾ ಅವರ ವೇತನ ಶ್ರೇಣಿಯ ಮುಂದೆ ಸೂಚಿಸಿರುವ ಅವಧಿ ಯಾವುದೋ ನಂತರ ಬರುವುದೋ ಆ ತಿಂಗಳಲ್ಲಿ ನಗದೀಕರಣ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.

| **ಕ್ರಮ ಸಂಖ್ಯೆ** | **ವೇತನ ಶ್ರೇಣಿ ರೂ.** | **ಮುಂಚಿತವಾಗಿ ಒಂದು ತಿಂಗಳ ನೋಟಿಸ್ ನೀಡಿ 2011–2012ರ ಬ್ಲಾಕ್ ಅವಧಿಗೆ ನಗದೀಕರಣ ಸೌಲಭ್ಯ ಪಡೆಯುವ ಅವಧಿ** |
|---|---|---|
| 1 | 4800–7275 ರಿಂದ 6800–13000 ರವರೆಗೆ | ಮೇ 2011 ರ ನಂತರ (ದಿ: 1–6–2011 ರಿಂದ ದಿ: 31–12–2011 ರವರೆಗೆ) |
| 2 | 7275–13350 ರಿಂದ 28275–39900 ರವರೆಗೆ | ಮೇ 2012 ರ ನಂತರ (ದಿ: 1–6–2012 ರಿಂದ ದಿ: 31–12–2012 ರವರೆಗೆ) |

3. ಆದಾಗ್ಯೂ ಕಂಡಿಕೆ 2 ರಲ್ಲಿ ತಿಳಿಸಿರುವುದು ಏನೇ ಇದ್ದಾಗ್ಯೂ ಈ ಬ್ಲಾಕ್ ಅವಧಿಯಲ್ಲಿ ಗಳಿಕೆ ರಜೆಯನ್ನು ಬಿಟ್ಟುಕೊಡುವ ಮತ್ತು ನಗದೀಕರಣ ಸೌಲಭ್ಯವನ್ನು ಪಡೆಯಲು ಅರ್ಹರಿದ್ದು, ಸದರಿ ಅವಧಿಯಲ್ಲಿ ನಿವೃತ್ತಿ ಹೊಂದುವ ಸರ್ಕಾರಿ ನೌಕರರು ಎರಡನೇ ಕಂಡಿಕೆಯ ಕೋಷ್ಟಕದಲ್ಲಿ ಅವರ ವೇತನ ಶ್ರೇಣಿಯ ಮುಂದೆ ಸೂಚಿಸಿರುವ ಅವಧಿಯಲ್ಲಿ ಅಥವಾ ಅವರ ಸೇವೆಯ ಕೊನೆಯ ತಿಂಗಳಲ್ಲಿ ಇದರಲ್ಲಿ ಯಾವುದು ಮೊದಲೋ ಆ ತಿಂಗಳಲ್ಲಿ ನಗದೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

4. ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣಕ್ಕಾಗಿ ನಿರ್ದಿಷ್ಟಪಡಿಸಿದ ಅವಧಿಯ ಪೂರ್ವದಲ್ಲಿ ಯಾವ ಸರ್ಕಾರಿ ನೌಕರನ ಗಳಿಕೆ ರಜೆಯ ಲೆಕ್ಕದಲ್ಲಿ ಗರಿಷ್ಠ ಮೊತ್ತದ 240 ದಿನಗಳು ಮೀರುತ್ತದೆಯೋ ಅಂತಹ ಪ್ರಕರಣಗಳಲ್ಲಿ ಮೇಲಿನ ಕಂಡಿಕೆ 2ರಲ್ಲಿನ ಕೋಷ್ಟಕದಲ್ಲಿ ನಮೂದಿಸಿರುವ ಅವಧಿಯ ಬದಲಾಗಿ, ಗರಿಷ್ಠ ಮೊತ್ತದ 240 ದಿನಗಳ ಗಳಿಕೆ ರಜೆ ಮೀರುವ ತಿಂಗಳಿನ ತಕ್ಷಣದ ಹಿಂದಿನ ತಿಂಗಳಿನಲ್ಲಿ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಿಸಲು ಅನುಮತಿಸಲಾಗಿದ್ದು, ಸಂಬಂಧಪಟ್ಟ ವರ್ಷದ ಬ್ಲಾಕ್ ಅವಧಿಯ ಜೂನ್ ತಿಂಗಳ ಅವಧಿಯಲ್ಲಿ (ನ್ಯಾಯಾಂಗ ಇಲಾಖೆಯ ಸಿಬ್ಬಂದಿ ವರ್ಗದವರಿಗೆ ಸಂಬಂಧಿಸಿದಂತೆ ಮೇ ತಿಂಗಳ ಕೊನೆಯಲ್ಲಿ) ಅಥವಾ ಡಿಸೆಂಬರ್ ತಿಂಗಳ ಕೊನೆಯಲ್ಲಿ ಅಂದರೆ ಜೂನ್ 2011, ಡಿಸೆಂಬರ್ 2011ರ ಕೊನೆಯಲ್ಲಿ ಪಡೆಯಲು ಅರ್ಹರಾಗಿರುತ್ತಾರೆ. ದಿನಾಂಕ 31–05–2011 ರಂದು ಅಥವಾ ಅದಕ್ಕೆ ಮೊದಲು ಅರ್ಜಿ ಸಲ್ಲಿಸಿರುವ ನ್ಯಾಯಾಂಗ ಇಲಾಖೆಯ ನೌಕರರ ಲೆಕ್ಕದಲ್ಲಿ ದಿನಾಂಕ 01–06–2011 ರಂದು 240 ದಿನಗಳಿಗಿಂತ ಹೆಚ್ಚು ಗಳಿಕೆ ರಜೆ ಮೀರುವ ಸಂದರ್ಭದಲ್ಲಿ ಮಾತ್ರ ಈ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಈ ಅವಕಾಶದಿಂದಾಗಿ ಗಳಿಕೆ ರಜೆ ನಗದೀಕರಣ ಸೌಲಭ್ಯವು ಒಂದು ಬ್ಲಾಕ್ ಅವಧಿಗೆ ಸೀಮಿತಗೊಳಿಸಿರುವ 30 ದಿನಗಳ ಗರಿಷ್ಠ ಮಿತಿಯನ್ನು ಆಯಾ ಬ್ಲಾಕ್ ಅವಧಿಯಲ್ಲಿ ಯಾವುದೇ ಕಾರಣಕ್ಕೂ ಮೀರತಕ್ಕದಲ್ಲ. ಅಂದರೆ ಎರಡು ವರ್ಷಗಳ ಬ್ಲಾಕ್ ಅವಧಿಯಲ್ಲಿ ಒಮ್ಮೆ ಮಾತ್ರ ಗರಿಷ್ಠ 30 ದಿನಗಳ ಗಳಿಕೆ ರಜೆ ನಗದೀಕರಣ ಪಡೆಯಲು ಅವಕಾಶವಿರುತ್ತದೆ.

5. ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 118ರಲ್ಲಿ ನಿಯಮಿಸಿರುವಂತಹ ಗಳಿಕೆ ರಜೆ ನಗದೀಕರಣ ನಿಯಂತ್ರಣಕ್ಕೆ ಸಂಬಂಧಿಸಿದ ಇತರೇ ಷರತ್ತುಗಳು ಅನ್ವಯವಾಗುತ್ತದೆ.

6. ಈ ಆದೇಶವು ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 94 ಆರ್ಥಿಕ ಇಲಾಖೆ, (ಸೇವೆಗಳು–1).

## ಆರ್ಥಿಕ ಸಚಿವಾಲಯ

**ವಿಷಯ** : ಸರ್ಕಾರಿ ನೌಕರರು ಪಡೆದ ಹೆಚ್.ಡಿ.ಎಫ್.ಸಿ., ಗೃಹ ಖರೀದಿ ಮುಂಗಡದ ಮೇಲಿನ ಹೆಚ್ಚುವರಿಯಾಗಿ ಪಾವತಿಸಿರುವ ಬಡ್ಡಿ ಹಣವನ್ನು ಮರುಪಾವತಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 95 ಎಹೆಚ್‌ಬಿ 89, ದಿನಾಂಕ 26–07–1989

2) ಅಧಿಕೃತ ಜ್ಞಾಪನ ಸಂ. ಎಫ್‌ಡಿ 95 ಎಹೆಚ್‌ಬಿ 89, ದಿನಾಂಕ 11–09–1989

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್.ಡಿ.ಎಫ್.ಸಿ., ಸಂಸ್ಥೆಯ ಮೂಲಕ ಸರ್ಕಾರಿ ನೌಕರರಿಗೆ ಗೃಹ ಖರೀದಿ/ನಿರ್ಮಾಣ ಮುಂಗಡವನ್ನು ಮಂಜೂರು ಮಾಡಲು ಆದೇಶ ಹೊರಡಿಸಲಾಗಿದೆ. ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ

ಹೆಚ್.ಡಿ.ಎಫ್.ಸಿ., ಸಂಸ್ಥೆಯ ಮೂಲಕ ಮಂಜೂರು ಮಾಡಲಾದ ಗೃಹ ಖರೀದಿ/ನಿರ್ಮಾಣ ಮುಂಗಡದ ಮರುಪಾವತಿ ಕಾರ್ಯವಿಧಾನವನ್ನು ತಿಳಿಸಲಾಗಿದೆ. ಅಲ್ಲದೇ ಖಜಾನೆ ನಿರ್ದೇಶಕರನ್ನು, ಬಡ್ಡಿ ಮೊತ್ತ ಸೇರಿದಂತೆ ಸಂಪೂರ್ಣ ಮುಂಗಡ ಮೊತ್ತದ ಮರುಪಾವತಿ ಕಂತುಗಳನ್ನು ನಿಯಮಿತವಾಗಿ ಹೆಚ್.ಡಿ.ಎಫ್.ಸಿ., ಸಂಸ್ಥೆಗೆ ಪಾವತಿಸುವ ಕಾರ್ಯವಿಧಾನದ, ಉಸ್ತುವಾರಿ ಮತ್ತು ಲೆಕ್ಕವಿಡುವ ಪ್ರಾಧಿಕಾರವೆಂದು ನೇಮಿಸಲಾಗಿದೆ. ಯಾವುದೇ ಸರ್ಕಾರಿ ನೌಕರ ರಾಜ್ಯ ಸರ್ಕಾರದಿಂದ, ಹೆಚ್.ಡಿ.ಎಫ್.ಸಿ. ಸಂಸ್ಥೆಯ ಮೂಲಕ, ಗೃಹ ಖರೀದಿ/ನಿರ್ಮಾಣ ಮುಂಗಡವನ್ನು ಪಡೆಯಲು ಉದ್ದೇಶಿಸಿದಲ್ಲಿ ಮುಂಗಡ ಮಂಜೂರಾತಿ ಆದೇಶವನ್ನು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರೇ ಹೊರಡಿಸುತ್ತಾರೆ.

ಕೆಲವೊಂದು ಸಂದರ್ಭಗಳಲ್ಲಿ ನಿಗದಿತ ಮುಂಗಡ ಮೊತ್ತ ಅಥವಾ ಬಡ್ಡಿ ಮೊತ್ತಕ್ಕಿಂತಲೂ ಹೆಚ್ಚಿನ ಮೊತ್ತವನ್ನು ಸರ್ಕಾರಕ್ಕೆ ಮರುಪಾವತಿಸಿರುವುದರಿಂದ ಹೆಚ್ಚುವರಿಯಾಗಿ ಪಾವತಿಸಿದಂತಹ ಮೊತ್ತವನ್ನು ಮರುಪಾವತಿಸುವಂತೆ ಮುಂಗಡದಾರರು ಖಜಾನೆ ನಿರ್ದೇಶಕರಿಗೆ ಕೋರಿಕೆಯನ್ನು ಸಲ್ಲಿಸುತ್ತಾರೆ. ಇಂತಹ ಕೋರಿಕೆಗಳನ್ನು ಪರಿಶೀಲಿಸಿ, ಖಜಾನೆ ನಿರ್ದೇಶಕರು ಹೆಚ್ಚುವರಿ ಮುಂಗಡದ ಮೊತ್ತ ಅಥವಾ ಬಡ್ಡಿ ಮೊತ್ತ ಪಾವತಿಸಿರುವುದನ್ನು ಖಚಿತಪಡಿಸಿಕೊಂಡು, ಹೆಚ್ಚುವರಿ ಮೊತ್ತವನ್ನು ಮರುಪಾವತಿಸಲು ಅನುಮತಿ ನೀಡುವಂತೆ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸುತ್ತಿರುವ ಪ್ರಕರಣಗಳ ಸಂಖ್ಯೆ ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವುದನ್ನು ಸರ್ಕಾರ ಗಮನಿಸಿದೆ.

ಈಗಾಗಲೇ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಖಜಾನೆ ನಿರ್ದೇಶಕರನ್ನು ಮುಂಗಡ ಮರುಪಾವತಿ ಕಂತುಗಳನ್ನು ನಿಯಮಿತವಾಗಿ ಹೆಚ್.ಡಿ.ಎಫ್.ಸಿ., ಸಂಸ್ಥೆಗೆ ಪಾವತಿಸುವ ಕಾರ್ಯವಿಧಾನದ ಉಸ್ತುವಾರಿ ಮತ್ತು ಲೆಕ್ಕವಿಡುವ ಪ್ರಾಧಿಕಾರವೆಂದು ನೇಮಿಸಲಾಗಿರುವುದರಿಂದ ಇನ್ನು ಮುಂದೆ ಮುಂಗಡದಾರರು ಗೃಹ ಮುಂಗಡದ ಮೊತ್ತ ಅಥವಾ ಬಡ್ಡಿ ಮೊತ್ತವನ್ನು ಸರ್ಕಾರಕ್ಕೆ ಹೆಚ್ಚುವರಿಯಾಗಿ ಪಾವತಿಸಿದ ಸಂದರ್ಭಗಳಲ್ಲಿ ಹೆಚ್ಚುವರಿ ಮೊತ್ತವನ್ನು ಸೂಕ್ತ ಲೆಕ್ಕ ಪರಿಶೀಲನೆ ನಂತರ, ಮುಂಗಡದಾರರಿಗೆ ಮರುಪಾವತಿಸುವ ಬಗ್ಗೆ ಆರ್ಥಿಕ ಇಲಾಖೆಯ ಅನುಮತಿ ಪಡೆಯದೇ ತಮ್ಮ ಹಂತದಲ್ಲಿಯೇ ಸೂಕ್ತ ತೀರ್ಮಾನ ಕೈಗೊಳ್ಳುವ ಅಧಿಕಾರವನ್ನು ಖಜಾನೆ ನಿರ್ದೇಶಕರಿಗೆ ನೀಡುವುದು ಸಮಂಜಸವೆಂದು ಸರ್ಕಾರ ತೀರ್ಮಾನಿಸಿದೆ. ಅದರಂತೆ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 18 ಮಕಮು 2010, ಬೆಂಗಳೂರು, ದಿನಾಂಕ: 22-12-2010**

ಸರ್ಕಾರಿ ನೌಕರರು ರಾಜ್ಯ ಸರ್ಕಾರದಿಂದ ಹೆಚ್.ಡಿ.ಎಫ್.ಸಿ., ಸಂಸ್ಥೆಯ ಮೂಲಕ ಪಡೆದಿರುವ ಗೃಹ ಖರೀದಿ/ನಿರ್ಮಾಣ ಮುಂಗಡ ಮೊತ್ತ ಅಥವಾ ಬಡ್ಡಿ ಮೊತ್ತವನ್ನು ಹೆಚ್ಚುವರಿಯಾಗಿ ಪಾವತಿಸಿದ ಸಂದರ್ಭಗಳಲ್ಲಿ ಹೆಚ್ಚುವರಿ ಮೊತ್ತವನ್ನು ಸೂಕ್ತ ಲೆಕ್ಕ ಪರಿಶೀಲನೆ ನಂತರ, ಮುಂಗಡದಾರರಿಗೆ ಮರುಪಾವತಿಸುವ ಬಗ್ಗೆ ಸೂಕ್ತ ತೀರ್ಮಾನ ಕೈಗೊಳ್ಳಲು ಖಜಾನೆ ಇಲಾಖೆಯ ನಿರ್ದೇಶಕರನ್ನು ಸಕ್ಷಮ ಪ್ರಾಧಿಕಾರವೆಂದು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

ಪಿ.ಆರ್. ನಂ. 95

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಚುನಾವಣೆ) ಈ ಹುದ್ದೆಯನ್ನು ಐ.ಎ.ಎಸ್. ಶೃಂಗ ಶ್ರೇಣಿಯಲ್ಲಿ ಸೃಜಿಸುವ/ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ** : ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 431 ಸಅಸೇ 2010, ದಿನಾಂಕ 01-12-2010.

**ಪ್ರಸ್ತಾವನೆ :**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಸಿ. ಎಸ್. ಸುರಂಜನ, ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಿ.ಆ.ಸು.ಇಲಾಖೆ (ಚುನಾವಣೆ) ಇವರಿಗೆ ಐ.ಎ.ಎಸ್. ಶೃಂಗ ಶ್ರೇಣಿ ರೂ. 80,000/- (ನಿಗಧಿತ) ವೇತನ ಶ್ರೇಣಿಗೆ ಮುಂಬಡ್ತಿ ನೀಡಿ ಅವರು ಹೊಂದಿರುವ ಹುದ್ದೆಯನ್ನು ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಸಿ.ಆ.ಸು.ಇಲಾಖೆ (ಚುನಾವಣೆ)ಯೆಂದು ಮುಂದುವರೆಸಲಾಗಿದೆಯೆಂದು, ಆದ್ದರಿಂದ ಈ ಹುದ್ದೆಯನ್ನು ದಿನಾಂಕ 26-10-2010 ರಿಂದ ಒಂದು ವರ್ಷದ ಅವಧಿಗೆ ಅಥವಾ ಹುದ್ದೆಯು ಪುನರ್‌ಜ್ಜೀವಿತಗೊಳ್ಳುವವರೆಗೆ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಚುನಾವಣೆಗಳು) ಐ.ಎ.ಎಸ್. ಶೃಂಗ ಶ್ರೇಣಿಯ ರೂ. 80,000/- (ನಿಗಧಿತ) ವೇತನ ಶ್ರೇಣಿಗೆ ಉನ್ನತೀಕರಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 585 ಸಅಸೇ 2010, ಬೆಂಗಳೂರು, ದಿನಾಂಕ: 14-12-2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸಿ.ಆ.ಸು. (ಚುನಾವಣೆಗಳು) ಇಲಾಖೆಯಲ್ಲಿನ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹುದ್ದೆಯನ್ನು ದಿನಾಂಕ 26-11-2010 ರಿಂದ ಒಂದು ವರ್ಷದ ಅವಧಿಗೆ ಅಥವಾ ಅಧಿಕಾರಿಯು ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಐ.ಎ.ಎಸ್. ಶೃಂಗ ಶ್ರೇಣಿ ರೂ. 80,000/- (ನಿಗಧಿತ)ಗಳ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಅಪರ ಮುಖ್ಯ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಚುನಾವಣೆಗಳು) ಎಂದು ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-07-1996 ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆಯೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-3)

ಪಿ.ಆರ್. ನಂ. 96

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ಸುತ್ತೋಲೆ

ಸಂಖ್ಯೆ: ಸಿಆಸುಇ 79 ಸೇವನೆ 2010, ಬೆಂಗಳೂರು, ದಿನಾಂಕ 14–12–2010

**ವಿಷಯ** : ಭಾರತದ ಜನಗಣತಿ 2011 ಜನಗಣನಾ ಕೆಲಸ ಕಾರ್ಯದಲ್ಲಿ ತೊಡಗಿಸಲ್ಪಡುವ ಸರ್ಕಾರಿ ನೌಕರರಿಗೆ ಕೆಲವು ರಿಯಾಯಿತಿಗಳನ್ನು ವಿಸ್ತರಿಸುವ ಬಗ್ಗೆ.

**ಉಲ್ಲೇಖ** : ನಿರ್ದೇಶಕರು, ಜನಗಣತಿ, ಕರ್ನಾಟಕ, ಬೆಂಗಳೂರು ಇವರ ಅ.ಸ. ಪತ್ರ ಸಂಖ್ಯೆ: C&T/7/C&T/2010, ದಿನಾಂಕ 22–11–2010.

***

2011ನೇ ಸಾಲಿನ ಫೆಬ್ರವರಿ 9ರಿಂದ ಮಾರ್ಚ್ 5ರ ವರೆಗೆ ಎರಡನೆ ಹಂತದ ಭಾರತದ ಜನಗಣತಿ–2011 ರ ಜನ ಎಣಿಕೆಯ ಕಾರ್ಯ ನಡೆಯಲಿದ್ದು, ಅದರಂತೆ ರಾಜ್ಯದಾದ್ಯಂತ ಜನಗಣತಿ ಕಾರ್ಯಕ್ಕಾಗಿ ತೊಡಗಿಸಲ್ಪಡುವ ಸರ್ಕಾರಿ ನೌಕರರು ಜನಗಣತಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ, ಜನಗಣತಿಯ ಅವಧಿಯಲ್ಲಿ ಅಂದರೆ ದಿನಾಂಕ 09–02–2011 ರಿಂದ 05–03–2011ರವರೆಗೆ (ಉಭಯ ದಿನಗಳೂ ಸೇರಿದಂತೆ) ಪೂರ್ವಾಹ್ನ ಅಥವಾ ಅಪರಾಹ್ನ ಕಛೇರಿಯನ್ನು ಬಿಡಲು ಅನುಮತಿ ನೀಡಬೇಕೆಂದು ನಿರ್ದೇಶಕರು, ಜನಗಣತಿ, ಕರ್ನಾಟಕ, ಬೆಂಗಳೂರು ರವರು ಮೇಲೆ ಉಲ್ಲೇಖಿಸಿರುವ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ರಾಜ್ಯದಲ್ಲಿ ಭಾರತದ ಜನಗಣತಿ 2011ರ ಕಾರ್ಯಕ್ಕಾಗಿ ತೊಡಗಿಸಲ್ಪಡುವ ಸರ್ಕಾರಿ ನೌಕರರು ಜನಗಣತಿ ಕಾರ್ಯವನ್ನು ನಿರ್ವಹಿಸಲು ಅನುವಾಗುವಂತೆ ದಿನಾಂಕ 09–02–2011 ರಿಂದ 05–03–2011 ರವರೆಗೆ (ಉಭಯ ದಿನಗಳೂ ಸೇರಿದಂತೆ) ಪೂರ್ವಾಹ್ನ ಅಥವಾ ಅಪರಾಹ್ನ ಅರ್ಧ ದಿನ ಅವಧಿಗೆ ಕಛೇರಿಯನ್ನು ಬಿಡಲು ಸರ್ಕಾರವು ಅನುಮತಿ ನೀಡಿದೆ.

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಪಿ.ಆರ್. ನಂ. 97

## ಶಿಕ್ಷಣ ಸಚಿವಾಲಯ

**ವಿಷಯ** : ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣಿಬೆನ್ನೂರು ಇಲ್ಲಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿರುವ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ** :
1) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 16948/2004 (ಜಿ.ಎಮ್/ಪಿಸಿಸಿ)ರಲ್ಲಿ ನ್ಯಾಯಾಲಯವು ದಿನಾಂಕ 16–04–2004ರಂದು ನೀಡಿರುವ ಆದೇಶ.
2) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ 25–06–2005
3) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ 20–08–2005
4) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ 26–09–2005
5) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:146: ಆ.ನೇ.ಧಾ.ವಿ: ಖಾಕಾವಿ–2:2003–04, ದಿನಾಂಕ 01–10–2010.

***

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 16–04–2004ರ ತೀರ್ಪಿನಲ್ಲಿನ ನ್ಯಾಯಾಲಯದಲ್ಲಿ ಬಾಕಿ ಇರುವ ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣಿಬೆನ್ನೂರು ಇಲ್ಲಿನ ಆಡಳಿತ ಮಂಡಳಿಯ ವಿವಾದವು ನ್ಯಾಯಾಲಯದಲ್ಲಿ ಇತ್ಯರ್ಥವಾಗುವವರೆಗೆ ಹಾವೇರಿ ಜಿಲ್ಲಾಧಿಕಾರಿಯಾದ ಶ್ರೀ ಬಿ. ಹೆಚ್. ಪೂಜಾರ್ ರವರು ಆಡಳಿತಾಧಿಕಾರಿಯಾಗಿ ದಿನಾಂಕ 14–05–2004 ರಿಂದ ಅಧಿಕಾರ ವಹಿಸಿಕೊಂಡಿದ್ದರು. ಶ್ರೀ ಬಿ. ಹೆಚ್. ಪೂಜಾರ್ ರವರು ದಿನಾಂಕ 28–02–2005ರಂದು ವಯೋನಿವೃತ್ತಿ ಹೊಂದಿದ ಕಾರಣ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನದ ಸಹಾಯಕರು ಹೆಚ್ಚುವರಿ ಪ್ರಭಾರದಲ್ಲಿದ್ದ ಕಾರಣ ಮೇಲೆ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ 25–06–2005ರ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು. ಹಾವೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ರೆಗ್ಯುಲರ್ ವಿಭಾಗಾಧಿಕಾರಿಯನ್ನಾಗಿ ಶ್ರೀ ಡಿ. ಹೆಚ್. ಪಾಂಡುರಂಗನ್ ರವರನ್ನು ನೇಮಕ ಮಾಡಿದ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ 20–08–2005ರ ಆದೇಶದಲ್ಲಿ ಶ್ರೀ ಡಿ. ಹೆಚ್. ಪಾಂಡುರಂಗನ್ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಯಿತು. ಇದೀಗ ಪುನಃ ಶ್ರೀ ಪಾಂಡುರಂಗನ್ ರವರು ವರ್ಗಾವಣೆಯಾಗಿದ್ದು, ಅವರ ಸ್ಥಾನದಲ್ಲಿ ಶ್ರೀ ಬಿ. ಹೆಚ್. ಸಿದ್ದಪ್ಪರವರನ್ನು ನೇಮಕ ಮಾಡಲಾಗಿದೆ. ಉಪ ವಿಭಾಗಾಧಿಕಾರಿಗಳು ಆಗಿಂದಾಗ್ಗೆ ವರ್ಗಾವಣೆ ಅಥವಾ ನಿಯೋಜನೆಗೊಳ್ಳುತ್ತಾರೆ. ಪದೇ ಪದೇ ಪ್ರತಿಯೊಂದು ಸಂದರ್ಭದಲ್ಲೂ ವರ್ಗಾವಣೆಗೊಂಡ ಅಧಿಕಾರಿ ಹೆಸರಿನಲ್ಲಿ ಆದೇಶ ಹೊರಡಿಸುವುದರಿಂದ, ಸದರಿ ಸಂಘದ ಆಡಳಿತಾಧಿಕಾರಿಯಾಗಿ ತನ್ನ ಕರ್ತವ್ಯವನ್ನು ಸಂದರ್ಭಾನುಸಾರ ನಿರ್ವಹಿಸಲು ತೊಡಕುಂಟಾಗುತ್ತದೆ. ಆದುದರಿಂದ, ಉಪ ವಿಭಾಗಾಧಿಕಾರಿಯನ್ನು ಅವರ ಹೆಸರಿನಲ್ಲಿ ಆಡಳಿತಾಧಿಕಾರಿಯಾಗಿ ನೇಮಕ ಮಾಡುವ ಬದಲು ಮೇಲೆ (4)ರಲ್ಲಿ ಓದಲಾದ ದಿನಾಂಕ 26–09–2005 ರಲ್ಲಿ "ಹಾವೇರಿ ಉಪ ವಿಭಾಗಾಧಿಕಾರಿ"ಯನ್ನು (By Designation) ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್ ರಾಣೆಬೆನ್ನೂರು ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ನೇಮಕಾತಿ ಮಾಡಿದ್ದರ ಮೇರೆಗೆ ವಾದಿಗಳು ಸಲ್ಲಿಸಿದ್ದ Suit ಸಂಖ್ಯೆ: 358/2001ನ್ನು ವಜಾಗೊಳಿಸಿ ದಿನಾಂಕ 24–06–2010ರಂದು ದಿ ಅಡಿಷನಲ್ ಸಿವಿಲ್ ಜಡ್ಜ್ ಮತ್ತು 2ನೇ ಅಡಿಷನಲ್

ಜೆ.ಎಂ.ಎಫ್.ಸಿ. ನ್ಯಾಯಾಲಯವು ತೀರ್ಪು ನೀಡಿರುತ್ತದೆ. ಮೇಲೆ (1)ರಲ್ಲಿ ಓದಲಾದ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದಲ್ಲಿ "The Assistant Commissioner, Haveri sub-division, Haveri is appointed as administrator of the respondent No. 1, Sangha till the disposal of the suit" ಎಂದು ತಿಳಿಸಲಾಗಿದೆ. ಈ ವ್ಯಾಜ್ಯದ ಪ್ರತಿವಾದಿ ಸಂಖ್ಯೆ: 1 ರವರು suit No. 358/2001 ರ Defendents ರಾಗಿರುತ್ತಾರೆ. ಆದ್ದರಿಂದ ಇವರ ಪರವಾಗಿ ನ್ಯಾಯಾಲಯದಲ್ಲಿ ತೀರ್ಪು ಆಗಿರುವುದರಿಂದ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕಾತಿ ಮಾಡಿದ್ದ ಸರ್ಕಾರಿ ಆದೇಶವನ್ನು ಹಿಂದಕ್ಕೆ ಪಡೆಯಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 127 ಯುಪಿಸಿ 2010, ಬೆಂಗಳೂರು, ದಿನಾಂಕ: 16–12–2010**

ಮೇಲೆ ವಿವರಿಸಿದ ಕಾರಣಗಳಿಂದಾಗಿ ರಾಣೆಬೆನ್ನೂರಿನ ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್ ಇಲ್ಲಿಗೆ ಆಡಳಿತಾಧಿಕಾರಿಯಾಗಿ ನೇಮಕಾತಿ ಮಾಡಲಾಗಿದ್ದ ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ 26–09–2005ರ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

ಪಿ.ಆರ್. ನಂ. 98

## ಶಿಕ್ಷಣ ಸಚಿವಾಲಯ

**ವಿಷಯ** : ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಬಳ್ಳಾರಿಯಲ್ಲಿ ನೂತನವಾಗಿ ಸ್ಥಾಪನೆಗೊಂಡಿರುವ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2010, ದಿನಾಂಕ 27–07–2010
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 247 ಯುಎನ್ಇ 2010, ದಿನಾಂಕ 16–08–2010
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ 14–09–2010ರಂದು ನಡೆದ ಸಭಾ ನಡವಳಿಗಳು.

***

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯನ್ನು ಹೊರಡಿಸುವುದರ ಮೂಲಕ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನು ಒಳಗೊಂಡಂತೆ ಬಳ್ಳಾರಿಯಲ್ಲಿ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯವು ಸ್ಥಾಪನೆಗೊಂಡಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ, ಬಳ್ಳಾರಿಯಲ್ಲಿ ನೂತನವಾಗಿ ಸ್ಥಾಪನೆಗೊಂಡ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಪ್ರೊ. ಮಂಜಪ್ಪ ಡಿ. ಹೊಸಮನೆ, ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ, ಇವರನ್ನು ಪ್ರಥಮ ಕುಲಪತಿಯನ್ನಾಗಿ ನೇಮಕ ಮಾಡಲಾಗಿದೆ.

ಗುಲ್ಬರ್ಗ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಯಿಂದ ಪ್ರತ್ಯೇಕಗೊಂಡು ಬಳ್ಳಾರಿಯಲ್ಲಿ ಸ್ಥಾಪನೆಗೊಂಡಿರುವ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದ ಪ್ರತ್ಯೇಕತೆ, ಸಂಪನ್ಮೂಲಗಳ ಹಂಚಿಕೆ, ಪರೀಕ್ಷೆಗಳನ್ನು ನಡೆಸುವ ಬಗ್ಗೆ ಮತ್ತು ಇತ್ಯಾದಿ ವಿಷಯಗಳ ಬಗ್ಗೆ ಚರ್ಚಿಸಿ, ತೀರ್ಮಾನ ಕೈಗೊಳ್ಳಲು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ 14–09–2010ರಂದು ನಡೆದ ಸಭೆಯಲ್ಲಿ, ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಪೈಕಿ ಅವಶ್ಯಕತೆಗನುಗುಣವಾಗಿ ನೂತನವಾಗಿ ಸ್ಥಾಪಿತವಾದ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ನಿರ್ಧರಿಸಲಾಗಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 289 ಯುಎನ್ಇ 2010, ಬೆಂಗಳೂರು, ದಿನಾಂಕ: 14–12–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಪೈಕಿ ಈ ಕೆಳಕಂಡ ಬೋಧಕ ಮತ್ತು ಬೋಧಕೇತರ ಖಾಲಿ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ ಇಲ್ಲಿಗೆ ಸ್ಥಳಾಂತರಿಸಲಾಗಿದೆ.

**ಬೋಧಕ ಹುದ್ದೆಗಳು:–**

| ಕ್ರಸಂ. | ಹುದ್ದೆಯ ಹೆಸರು | ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ | ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸ್ಥಳಾಂತರಿಸಿದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಪ್ರಾಧ್ಯಾಪಕರು | 24 | 08 |
| 2 | ಅಸೋಸಿಯೇಟ್ ಪ್ರೊಫೆಸರ್ | 27 | 09 |
| 3 | ಅಸಿಸ್ಟೆಂಟ್ ಪ್ರೊಫೆಸರ್ | 54 | 17 |
| | ಒಟ್ಟು | 105 | 34 |

**ಬೋಧಕೇತರ ಹುದ್ದೆಗಳು:–**

| ಕ್ರ.ಸಂ. | ಹುದ್ದೆಯ ಹೆಸರು | ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ | ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸ್ಥಳಾಂತರಿಸಿದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಸಹಾಯಕ ಕಛೇರಿ ಅಧೀಕ್ಷಕ | 02 | 01 |
| 2 | ಶೀಘ್ರಲಿಪಿಗಾರರು | 04 | 02 |
| 3 | ಪ್ರಥಮ ದರ್ಜೆ ಸಹಾಯಕ | 02 | 01 |
| 4 | ಸ್ಟೋರ್ ಕೀಪರ್ | 02 | 01 |
| 5 | ದ್ವಿತೀಯ ದರ್ಜೆ ಸಹಾಯಕ | 11 | 04 |
| 6 | ಟೈಪಿಸ್ಟ್ | 06 | 02 |
| 7 | ಜವಾನ/ಕಾವಲುಗಾರ | 64 | 12 |
| 8 | ಗಾರ್ಡನ್ ವರ್ಕರ್/ಮಾಲಿ | 15 | 02 |
| 9 | ವಾಹನ ಚಾಲಕರು | 06 | 03 |
| 10 | ಸಹಾಯಕ ಅಭಿಯಂತರರು | 02 | 01 |
| 11 | ಕಿರಿಯ ಅಭಿಯಂತರರು | 05 | 02 |
| 12 | ಡ್ರಾಫ್ಟ್‌ಮ್ಯಾನ್ | 02 | 01 |
| 13 | ಎಲೆಕ್ಟ್ರಿಶಿಯನ್ | 01 | 01 |
| 14 | ಎಲೆಕ್ಟ್ರಿಕಲ್ ವೈರ್‌ಮನ್ | 02 | 01 |
| 15 | ಸಹಾಯಕ ಗ್ರಂಥಪಾಲಕ | 07 | 02 |
| 16 | ಸಹಾಯಕ ಗ್ರಂಥಪಾಲಕ ಗ್ರೇಡ್–2 | 01 | 01 |
| | ಒಟ್ಟು | 132 | 37 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಜಾಪಾಲಿ**

ಸರ್ಕಾರದ ಉಪ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. ನಂ. 99

## ಇಂಧನ ಸಚಿವಾಲಯ

**ವಿಷಯ** : M/s Green Horsepower Private Limited ಇವರಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ** : ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/03/GHPPL-D/10/2808, ದಿನಾಂಕ 5/6–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Green Horsepower Private Limited ಇವರಿಗೆ ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ನವಲಗುಂದ ಗ್ರಾಮದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪನೆಗೆ ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 419 ಎನ್‌ಸಿಇ 2010, ಬೆಂಗಳೂರು, ದಿನಾಂಕ: 16–12–2010**

M/s Green Horsepower Private Limited ಇವರಿಗೆ ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ನವಲಗುಂದ ಗ್ರಾಮದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪಿಸಲು ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ:–

a. The company shall obtain separate clearance from Karnataka Power Transmission Corporation limited in respect of evacuation of power.

b. The company shall enter into wheeling and Banking agreement with Hubli Electricity Supply Company Limited (HESCOM) in case of selling power to third party and power purchase agreement in case of selling power to HESCOM.

c. The company shall obtain necessary statutory clearance wherever required from the respective Departments/Organizations such as Forest Department, Revenue Department & Karnataka State Pollution Control Board, etc., for the power plant.

d. The detailed project report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. ನಂ. 100

## ಇಂಧನ ಸಚಿವಾಲಯ

**ವಿಷಯ :** M/s Green Horsepower Private Limited ಇವರಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿಕ ವಿದ್ಯುತ್ ಸ್ಥಾವರ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/03/GHPPL-H/10/2807 ದಿನಾಂಕ: 5/6–10–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Green Horsepower Private Limited ಇವರಿಗೆ ಹಾವೇರಿ ಜಿಲ್ಲೆಯ ಹಾವೇರಿ ತಾಲ್ಲೂಕಿನ ಗುತ್ತಲ ಗ್ರಾಮದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪನೆಗೆ ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 420 ಎನ್‌ಸಿಇ 2010, ಬೆಂಗಳೂರು, ದಿನಾಂಕ : 16ನೇ ಡಿಸೆಂಬರ್ 2010**

M/s Green Horsepower Private Limited ಇವರಿಗೆ ಹಾವೇರಿ ಜಿಲ್ಲೆಯ ಹಾವೇರಿ ತಾಲ್ಲೂಕಿನ ಗುತ್ತಲ ಗ್ರಾಮದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ Bio-mass ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪಿಸಲು **ಈ ಕೆಳಗಿನ ಷರತ್ತಿನಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ:–**

a. The company shall obtain separate clearance from Karnataka Power Transmission Corporation Limited in respect of evacuation of power.

b. The company shall enter into wheeling and Banking agreement with Hubli Electricity Supply Company Limited (HESCOM) in case of selling power to third party and power purchase agreement in case of selling power to HESCOM.

c. The company shall obtain necessary statutory clearance wherever required from the respective Departments/Organizations such as Forest Department, Revenue Department, and Karnataka State Pollution Control Board, etc. for the Power plant.

d. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 101

## ENERGY SECRETARIAT

Sub: Enhancement of wind power capacity from 7.00 MW to 30.60 MW in favour of M/s RSR Power Private Limited-reg.

Read:
1. Government Order No.: EN 337 NCE 2006 dated: 16-10-2006.
2. Government Order No.: EN 9 NCE 2007 dated: 12-01-2007.
3. Letter No. KRED/08/RSRPL-(7MW to 30.6) 2010/3057 dated: 29/30-10-2010 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction has been accorded for implementation of 63.00 MW capacity Wind Power Project at Shimoga, Bellary and Belgaum Districts in favour of M/s R. Sree Ramulu Reddy & Co.

In the Government Order read at (2) above, permission has been accorded for the change of company's name from M/s. R. Sree Ramulu Reddy & Co. to M/s RSR Power Private Limied.

The Managing Director, Karnataka Renewable Energy Development Limited, Bangalore vide his letter read at (3) above, has recommended to enhance the wind power capacity from 7.00 MW (part capacity of 63.00 MW) to 30.60 MW at Harapanahalli at Shrigaon, Naghral and Girgaon of Belgaum Districts infavour of M/s RSR Power Private Limited.

The proposal has been examined in detail and issued following Orders:-

**Government Order No.: EN 432 NCE 2010, Bangalore, Dated: 16th December 2010**

Government accords approval for enhancement of wind power capacity from 7.00 MW to 30.60 MW at Shirgaon, Naghral and Girgaon of Belgaum Districts in favour of M/s RSR Power Private Limited subject to condition that the company shall commission the project by 31-03-2011 and supply 25 MW power to State grid:-

The detailed Schedule is as below:-

| Geopraphical Area details | Sanctioned Capacity in MW | Enhancement Proposed in Stage-I | No. of WTG's & rating in Kw | Total capacity Including Proposed enhancement in MW |
|---|---|---|---|---|
| The identified potential comprises of two areas and is a mixture of hills and plains. | | | | |

| | | | | |
|---|---|---|---|---|
| Area-A is spread in N-E Direction of Shirgaon. Whereas Area-B is located in south of Girgaon and is spread in E-W directions. The geographical Co-ordinates of Area-A and Area-B are as follows: Toposheet No. 47L/11.<br>Area-A:<br>Latitude: $16^0$27'32"-$16^0$ 30'00"N<br>Longitude: $74^0$31'06"-$74^0$32'57"E<br>Ridge peaks-Average elevation of the area is 620M with one peak, 647M Amsl.<br>Area-B:<br>Latitude:$16^0$25'52"-$16^0$26'41"N<br>Longitude: $74^0$30'52"-$74^0$-32'41"E<br>Ridge peaks-Average elevation of the area is 720M. | 7.00 MW | 23.60 MW | 36 x 850 kw | 30.60 MW<br>(63 MW to 86.60 MW) |

The Government has reserved the right to cancel / modify this Order.

The other terms and conditions of the allotment Order read at (1) above shall continue as it is.

By Order and in the name of Governor of Karnataka

PR. No. 102

**Suresh. B. Krishnappanavar**
Under Secretary to Government
Energy Department

ಇಂಧನ ಸಚಿವಾಲಯ

**ವಿಷಯ :** ಮೆ: ದೀಪಕ್. ಎಂ. ಪಾಟೀಲ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 306 ಎನ್‌ಸಿಇ 2004 ದಿನಾಂಕ: 21–12–2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/2010/1001 ದಿನಾಂಕ: 15–04–2010.
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 213 ಎನ್‌ಸಿಇ 2010 ದಿನಾಂಕ: 26–04–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ದೀಪಕ್. ಎಂ. ಪಾಟೀಲ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪತಗುಡ್ಡದಲ್ಲಿ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ದೀಪಕ್. ಎಂ. ಪಾಟೀಲ್ ಇವರಿಗೆ ಹಂಚಿಕೆಯಾಗಿರುವ 5.25 ಮೆಗಾ ವ್ಯಾಟ್ ಸಾಮರ್ಥ್ಯವನ್ನು ರದ್ದುಪಡಿಸುವ ನಿಟ್ಟಿನಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ದೀಪಕ್. ಎಂ. ಪಾಟೀಲ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಈ ಯೋಜನೆಯ ಹಂಚಿಕೆಯಾಗಿ ಸುಮಾರು 5 ವರ್ಷಗಳಿಗೂ ಮೇಲ್ಪಟ್ಟ ಅವಧಿಯಲ್ಲಿ ಅಭಿವೃದ್ಧಿದಾರರು ಯಾವುದೇ ಪ್ರಗತಿಯನ್ನು ಸಾಧಿಸಿರುವ ಕುರಿತು ಕ್ರೆಡಲ್‌ಗಾಗಲೀ ಅಥವಾ ಸರ್ಕಾರಕ್ಕಾಗಲೀ ಮಾಹಿತಿ ನೀಡಿರುವುದಿಲ್ಲ. ಆದ್ದರಿಂದ, ಅಭಿವೃದ್ಧಿದಾರರು ಹಂಚಿಕೆ ಆದೇಶವನ್ನು ಪಡೆದ ನಂತರ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಪ್ರಗತಿಯನ್ನು ಸಾಧಿಸಿರುವುದಿಲ್ಲವೆಂದು ಭಾವಿಸಿ ಇವರ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ ಇಎನ್ 213 ಎನ್‌ಸಿಇ 2010, ಬೆಂಗಳೂರು, ದಿನಾಂಕ : 14ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಇಎನ್ 306 ಎನ್‌ಸಿಇ 2004 ದಿನಾಂಕ: 21–12–2004ರಲ್ಲಿ ಮೆ: ದೀಪಕ್. ಎಂ. ಪಾಟೀಲ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪತಗುಡ್ಡದಲ್ಲಿ ಹಂಚಿಕೆ ಮಾಡಲಾಗಿರುವ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 103

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 120.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 58 ಎನ್‌ಸಿಇ 2004 ದಿನಾಂಕ: 20-02-2004.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 429 ಎನ್‌ಸಿಇ 2007 ದಿನಾಂಕ: 05-12-2007.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 429 ಎನ್‌ಸಿಇ 2007 ದಿನಾಂಕ: 11-12-2007.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/2010/1001 ದಿನಾಂಕ: 15-04-2010.
5. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 214 ಎನ್‌ಸಿಇ 2010 ದಿನಾಂಕ: 26-04-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ದಾವಣಗೆರೆ, ಕೋಲಾರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಒಟ್ಟು 49.00 ಮೆಗಾ ವ್ಯಾಟ್ (15+12+22=49) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯಲ್ಲಿ ಹಂಚಿಕೆ ಮಾಡಲಾದ 22 ಮೆಗಾ ವ್ಯಾಟ್ (49 ಮೆಗಾ ವ್ಯಾಟ್‌ನ ಅಂಶಿಕ ಸಾಮರ್ಥ್ಯ) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರಿಗೆ ವರ್ಗಾವಣೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರ 22.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 120 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 120 ಮೆಗಾ ವ್ಯಾಟ್ ಸಾಮರ್ಥ್ಯವನ್ನು ರದ್ದುಪಡಿಸುವ ನಿಟ್ಟಿನಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿ, ದಿನಾಂಕ: 06-05-2010 ರಂದು ಉತ್ತರವನ್ನು ನೀಡಿರುತ್ತಾರೆ. ನೀಡಿರುವ ಉತ್ತರ ಪರಿಶೀಲಿಸಲಾಗಿ ಉತ್ತರವು ತೃಪ್ತಿಕರವಾಗಿರುವುದಿಲ್ಲ. ಆದುದರಿಂದ ಅಭಿವೃದ್ಧಿದಾರರು ಯೋಜನೆಯನ್ನು ಇದುವರೆಗೂ ಅನುಷ್ಠಾನಗೊಳಿಸದೇ ಇರುವುದರಿಂದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 214 ಎನ್‌ಸಿಇ 2010, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ: ಇಂಇ 58 ಎನ್‌ಸಿಇ 2004 ದಿನಾಂಕ: 20-02-2004, ಸಂಖ್ಯೆ: ಇಎನ್ 429 ಎನ್‌ಸಿಇ 2007 ದಿನಾಂಕ: 05-12-2007 ಮತ್ತು ಸಂಖ್ಯೆ: ಇಎನ್ 429 ಎನ್‌ಸಿಇ 2007 ದಿನಾಂಕ: 11-12-2007 ರಲ್ಲಿ ಮೆ: ಎನ್.ಎಸ್.ಎಲ್. ಪವರ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾಗಲಕೋಟೆ ಗ್ರಾಮದಲ್ಲಿ ಹಂಚಿಕೆ ಮಾಡಲಾದ 120.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

ಪಿ.ಆರ್. 104

## ಇಂಧನ ಸಚಿವಾಲಯ

**ವಿಷಯ :** ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 36 ಎನ್‌ಸಿಇ 2005 ದಿನಾಂಕ: 22-03-2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 279 ಎನ್‌ಸಿಇ 2005 ದಿನಾಂಕ: 14-10-2005.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 141 ಎನ್‌ಸಿಇ 2007 ದಿನಾಂಕ: 16-05-2007.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/2010/1001 ದಿನಾಂಕ: 15-04-2010.
5. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 210 ಎನ್‌ಸಿಇ 2010 ದಿನಾಂಕ: 26-04-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ತಿಪ್ಪಗೊಂಡನಹಳ್ಳಿ ಪ್ರದೇಶದಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಹನ್ನಿ, ಗೆಜ್ಜೆಗೊಂಡನಹಳ್ಳಿ, ತಿಮ್ಮಾಪುರ ಗ್ರಾಮಗಳಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 7.00 (5+2=7) ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 15 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು ರದ್ದುಪಡಿಸುವ ನಿಟ್ಟಿನಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿದ್ದು, ಯಾವುದೇ ಉತ್ತರವನ್ನು ಇದುವರೆಗೂ ಸಲ್ಲಿಸಿರುವುದಿಲ್ಲ. ಆದ್ದರಿಂದ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಪ್ರಗತಿಯನ್ನು ಸಾಧಿಸಿರುವುದಿಲ್ಲ ಹಾಗೂ ಯೋಜನೆಯು ಹಂಚಿಕೆಯಾಗಿ 5 ವರ್ಷಗಳು ಕಳೆದರೂ ಯೋಜನೆಯನ್ನು ಇದುವರೆಗೂ ಅನುಷ್ಠಾನಗೊಳಿಸದೇ ಇರುವುದರಿಂದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 210 ಎನ್‌ಸಿಇ 2010, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ: ಇಎನ್ 36 ಎನ್‌ಸಿಇ 2005 ದಿನಾಂಕ: 22-03-2005, ಸಂಖ್ಯೆ: ಇಎನ್ 279 ಎನ್‌ಸಿಇ 2005 ದಿನಾಂಕ: 14-10-2005 ಮತ್ತು ಸಂಖ್ಯೆ: ಇಎನ್ 141 ಎನ್‌ಸಿಇ 2007 ದಿನಾಂಕ: 16-05-2007ರಲ್ಲಿ ಮೆ: ಅಮೃತ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ತಿಪ್ಪಗೊಂಡನಹಳ್ಳಿ ಹಾಗೂ ಹನ್ನಿ, ಗೆಜ್ಜೆಗೊಂಡನಹಳ್ಳಿ, ತಿಮ್ಮಾಪುರ ಗ್ರಾಮಗಳಲ್ಲಿ ಹಂಚಿಕೆ ಮಾಡಲಾದ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 105

## ಇಂಧನ ಸಚಿವಾಲಯ

**ವಿಷಯ :** ಮೆ: ಸದ್ಗುರು ಸಾಯಿ ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಇ 284 ಎನ್‌ಸಿಇ 2004 ದಿನಾಂಕ: 13-09-2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17-04-2010.
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 180 ಎನ್‌ಸಿಇ 2010 ದಿನಾಂಕ: 26-04-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಸದ್ಗುರು ಸಾಯಿ ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಸಂಪಾಜೆ ಹೊಳೆಗೆ ಹೊಂದಿಕೊಂಡಂತೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊಯನಾಡು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ಸದ್ಗುರು ಸಾಯಿ ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ಸದ್ಗುರು ಸಾಯಿ ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿದ್ದು, ಉತ್ತರವನ್ನು ನೀಡಿರುತ್ತಾರೆ. ಅಭಿವೃದ್ಧಿದಾರರು ದಿನಾಂಕ: 05-05-2010ರ ಪತ್ರದಲ್ಲಿ ನೀಡಿರುವ ಉತ್ತರದಲ್ಲಿ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ನಿಂದ 10 ಮೆಗಾ ವ್ಯಾಟ್‌ಗೆ ಹೆಚ್ಚಿಸಿ, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 24 ತಿಂಗಳುಗಳವರೆಗೆ ವಿಸ್ತರಿಸಲು ಕೋರಿರುತ್ತಾರೆ. ಅಲ್ಲದೇ ಈ ಸಂಬಂಧ ಯೋಜನೆಯ ಇನ್ನೊಂದು ಯೋಜನೆಯೊಂದಿಗೆ overlap ಆಗುವುದೆಂದು ಘನ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 13236/07 ರಲ್ಲಿ ದಾವೆ ಹೂಡಿದ್ದು ಈ ಪ್ರಕರಣವನ್ನು ದಿನಾಂಕ:

14–07–2008 ರಂದು ಘನ ಉಚ್ಚ ನ್ಯಾಯಾಲಯವು ವಿಲೇ ಮಾಡಿ ಅಕ್ಷಾಂಶ–ರೇಖಾಂಶವನ್ನು ಬದಲಾಯಿಸಬಾರದೆಂದು ತಿಳಿಸಿರುತ್ತದೆ. ಯೋಜನೆಯು ಹಂಚಿಕೆಯಾಗಿ 6 ವರ್ಷಗಳು ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಗಣನೀಯವಾದ ಪ್ರಗತಿಯನ್ನು ಸಾಧಿಸಿಲ್ಲದಿರುವುದರಿಂದ ಹಾಗೂ ಯೋಜನೆಯು eco-sensitive ಪ್ರದೇಶದಲ್ಲಿ ಬರುವುದರಿಂದ, ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 180 ಎನ್‌ಸಿಇ 2010, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ: ಇಂಇ 284 ಎನ್‌ಸಿಇ 2004 ದಿನಾಂಕ: 13–09–2004 ರಲ್ಲಿ ಮೆ: ಸದ್ಗುರು ಸಾಯಿ ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಸಂಪಾಜೆ ಹೊಳೆಗೆ ಹೊಂದಿಕೊಂಡಂತೆ ಹಂಚಿಕೆ ಮಾಡಲಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊಯನಾಡು ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 106

## ಇಂಧನ ಸಚಿವಾಲಯ

**ವಿಷಯ :** ಮೆ: ಬಲೆಥ್ ಎನರ್ಜಿ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 35.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 60 ಎನ್‌ಸಿಇ 2004 ದಿನಾಂಕ: 04–03–2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/2010/1001 ದಿನಾಂಕ: 15–04–2010.
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 212 ಎನ್‌ಸಿಇ 2010 ದಿನಾಂಕ: 26–04–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಬಲೆಥ್ ಎನರ್ಜಿ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 35.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ಬಲೆಥ್ ಎನರ್ಜಿ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ಬಲೆಥ್ ಎನರ್ಜಿ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿ, ದಿನಾಂಕ: 03–05–2010 ರಂದು ಉತ್ತರವನ್ನು ನೀಡಿರುತ್ತಾರೆ. ಅಭಿವೃದ್ಧಿದಾರರು ಈ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಭೂ ಸರ್ವೆ ಮತ್ತು ಮೈಕ್ರೊಸೈಟಿಂಗ್ ಮಾಡಿದ್ದು, ಅರಣ್ಯ ಭೂಮಿಯನ್ನು ಪರಿವರ್ತನೆಗಾಗಿ ಅರಣ್ಯ ಇಲಾಖೆಗೆ ಅರ್ಜಿ ಸಲ್ಲಿಸಲಾಗಿದೆ ಎಂದು ತಿಳಿಸಿರುತ್ತಾರೆ. ಯೋಜನೆಯನ್ನು ಈಗಾಗಲೇ ಕ್ರೆಡಲ್‌ನ ಕೋರಿಕೆಯ ಮೇರೆಗೆ ಅಧ್ಯರ್ಪಿಸಿದ್ದು ಇದರ ಬದಲಿಗೆ ಬೇರೊಂದು ಯೋಜನೆಯನ್ನು ಹಂಚಿಕೆ ಮಾಡಬೇಕೆಂದು ಕೋರಿರುತ್ತಾರೆ. ಅಭಿವೃದ್ಧಿದಾರರ ಕೋರಿಕೆಯನ್ನು ಪರಿಗಣಿಸಲು ಅವಕಾಶವಿಲ್ಲ. ಆದ್ದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 212 ಎನ್‌ಸಿಇ 2010, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ: ಇಂಇ 60 ಎನ್‌ಸಿಇ 2004 ದಿನಾಂಕ: 04–03–2004 ರಲ್ಲಿ ಮೆ: ಬಲೆಥ್ ಎನರ್ಜಿ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ಗ್ರಾಮದಲ್ಲಿ ಹಂಚಿಕೆ ಮಾಡಲಾಗಿದ್ದ 35.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 107

## ಇಂಧನ ಸಚಿವಾಲಯ

**ವಿಷಯ :** ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 45.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 58 ಎನ್‌ಸಿಇ 2004 ದಿನಾಂಕ: 20–02–2004.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 275 ಎನ್‌ಸಿಇ 2007 ದಿನಾಂಕ: 29–08–2007.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/2010/1001 ದಿನಾಂಕ: 15–04–2010.
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 207 ಎನ್‌ಸಿಇ 2010 ದಿನಾಂಕ: 26–04–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ದಾವಣಗೆರೆ, ಕೋಲಾರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಒಟ್ಟು 49.00 ಮೆಗಾ ವ್ಯಾಟ್ (15+12+22=49) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ದಿನಾಂಕ: 20–02–2004ರ ಆದೇಶದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆ ಮಾಡಲಾಗಿದ್ದ 15 ಮೆಗಾ ವ್ಯಾಟ್ (49 ಮೆಗಾ ವ್ಯಾಟ್‌ನ ಅಂಶಿಕ ಸಾಮರ್ಥ್ಯ) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 33 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 45.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು ರದ್ದುಪಡಿಸುವ ನಿಟ್ಟಿನಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿ, ದಿನಾಂಕ: 05–05–2010 ರಂದು ಉತ್ತರವನ್ನು ನೀಡಿರುತ್ತಾರೆ. ನೀಡಿರುವ ಉತ್ತರವನ್ನು ಪರಿಶೀಲಿಸಲಾಗಿ ಉತ್ತರವು ತೃಪ್ತಿಕರವಾಗಿರುವುದಿಲ್ಲ. ಆದುದರಿಂದ ಯೋಜನೆಯು ಹಂಚಿಕೆಯಾಗಿ 6 ವರ್ಷಗಳು ಕಳೆದರೂ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ವಹಿಸಿರುವ ಕ್ರಮವು ಅತ್ಯಲ್ಪವಾಗಿರುತ್ತದೆ. ಆದ್ದರಿಂದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 207 ಎನ್‌ಸಿಇ 2010, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ: ಇಂಇ 58 ಎನ್‌ಸಿಇ 2004 ದಿನಾಂಕ: 20–02–2004, ಸಂಖ್ಯೆ: ಇಎನ್ 275 ಎನ್‌ಸಿಇ 2007 ದಿನಾಂಕ: 29–08–2007 ರಲ್ಲಿ ಮೆ: ನುಜಿವಿಡು ಸೀಡ್ಸ್ ಲಿಮಿಟೆಡ್ ಇವರಿಗೆ ಕೋಲಾರ ಜಿಲ್ಲೆಯ ಬಂಗಾರಪೇಟೆ ಗ್ರಾಮದಲ್ಲಿ ಹಂಚಿಕೆ ಮಾಡಲಾಗಿದ್ದ 12.00 ಮೆಗಾ ವ್ಯಾಟ್ ಮತ್ತು ದಾವಣಗೆರೆ ಜಿಲ್ಲೆಯ ಲಿಂಗದಹಳ್ಳಿ ತಾರೆಹಳ್ಳಿ, ಕೆಳಗೇಟು ಹಾಗೂ ಜಗಲೂರು ಗ್ರಾಮಗಳ ಪಶ್ಚಿಮಕ್ಕೆ ಹಂಚಿಕೆ ಮಾಡಲಾದ 33.00 ಮೆಗಾ ವ್ಯಾಟ್ (ಒಟ್ಟು 45.00 ಮೆಗಾ ವ್ಯಾಟ್) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 108

## ಯುವಜನ ಸೇವಾ ಸಚಿವಾಲಯ

**ವಿಷಯ :** 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಕೈಗೊಳ್ಳಲಾದ ಈಜುಕೊಳ ಮತ್ತು ಕ್ರೀಡಾಂಗಳ ನಿರ್ಮಾಣ ಯೋಜನೆಯ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯವನ್ನು ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ಪತ್ರ ಸಂಖ್ಯೆ : ಡಿವೈಎಸ್‌ಎಸ್/ಟಿಎಫ್‌ಸಿ–2/10–11, ದಿನಾಂಕ : 16–08–2010.

**ಪ್ರಸ್ತಾವನೆ :**

12ನೇ ಹಣಕಾಸು ಆಯೋಗದ ಅನುದಾನದಲ್ಲಿ ಬೆಂಗಳೂರು ನಗರ, ಮೈಸೂರು, ಉಡುಪಿ, ಗುಲ್ಬರ್ಗಾ, ಶಿವಮೊಗ್ಗ, ಧಾರವಾಡ, ಕೋಲಾರ, ದಕ್ಷಿಣ ಕನ್ನಡ, ಕೊಡಗು, ಮಂಡ್ಯ, ಹಾಸನ, ಬೀದರ್, ಚಿತ್ರದುರ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಒಳಾಂಗಣ ಕ್ರೀಡಾಂಗಣಗಳನ್ನು ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಚಿಕ್ಕಮಗಳೂರು, ಚಿತ್ರದುರ್ಗ, ಬಾಗಲಕೋಟೆ ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಒಳಾಂಗಣ ಕ್ರೀಡಾಂಗಣಗಳಿಗಾಗಿ Indoor Hall ನಿರ್ಮಾಣ ಮಾಡಲಾಗಿದೆ, ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರು ಮೇಲೆ ಓದಲಾದ ದಿನಾಂಕ : 16–08–2010ರ ಪತ್ರದಲ್ಲಿ ಈ ನಿರ್ಮಾಣ ಕಾರ್ಯಗಳ 2010–11ನೇ ಸಾಲಿನ ಮೌಲ್ಯಮಾಪನವನ್ನು ನಿಯಮಾನುಸಾರ ಬಾಹ್ಯ ಸಂಸ್ಥೆಗೆ ವಹಿಸುವಂತೆ ಕೋರಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 65 ಸಮನ 10, ಬೆಂಗಳೂರು, ದಿನಾಂಕ: 20–12–2010**

12ನೇ ಹಣಕಾಸು ಆಯೋಗದ ಅನುದಾನದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕೈಗೊಳ್ಳಲಾದ ಈಜುಕೊಳ ಮತ್ತು ಕ್ರೀಡಾಂಗಣ ನಿರ್ಮಾಣ ಕಾರ್ಯಕ್ರಮದ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯವನ್ನು ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್, ನಂ. 312,

ಕಾವೇರಿ ಬ್ಲಾಕ್, ಎ–4, ನ್ಯಾಷನಲ್ ಗೇಮ್ಸ್ ಕಾಂಪ್ಲೆಕ್ಸ್, ಕೋರಮಂಗಲ, ಬೆಂಗಳೂರು–560 047, ಈ ಸಂಸ್ಥೆಯ ಮೂಲಕ ಕೈಗೊಳ್ಳಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ. ಮೌಲ್ಯಮಾಪನದ ಪರಿಶೀಲನಾಂಶಗಳು ಈ ಕೆಳಕಂಡಂತಿದೆ.

1. ಒಳಾಂಗಣ ಕ್ರೀಡಾಂಗಣಗಳು ಮತ್ತು ಈಜುಕೊಳಗಳ ನಿರ್ಮಾಣದ ಉದ್ದೇಶ ಸಾಧನೆಯಲ್ಲಿ ಯಶಸ್ವಿಯಾಗಿದೆಯೇ ?
2. ಒಳಾಂಗಣ ಕ್ರೀಡಾಂಗಣ ಮತ್ತು ಈಜುಕೊಳಗಳ ನಿರ್ವಹಣಾ ವ್ಯವಸ್ಥೆ ಸಮರ್ಪಕವಾಗಿದೆಯೇ ? ಇಲ್ಲವಾದಲ್ಲಿ ನಿರ್ವಹಣಾ ವ್ಯವಸ್ಥೆಯಲ್ಲಿ ಕೈಗೊಳ್ಳಬಹುದಾದ ಬದಲಾವಣೆಗಳ ರೂಪುರೇಷೆಗಳು ;
3. ಈ ಕ್ರೀಡಾ ಸೌಲಭ್ಯಗಳಿಂದ ಈಜು ಹಾಗೂ ಒಳಾಂಗಣ ಕ್ರೀಡೆಗಳ ಬೆಳವಣಿಗೆಗೆ ಕೈಗೊಳ್ಳಬೇಕಾದ ಕ್ರಮಗಳು.
4. ಈ ಮೂಲಭೂತ ಸೌಕರ್ಯಗಳ ಮೇಲೆ ಹೂಡಿರುವ ಬಂಡವಾಳದಿಂದ ಕ್ರೀಡೆಗಳ ಅಭಿವೃದ್ಧಿಗೆ ದೊರಕಿರುವ ಲಾಭಗಳು ;

ಅಲ್ಲದೆ ಈ ಮೌಲ್ಯಮಾಪನದ ಉದ್ದೇಶಕ್ಕಾಗಿ ಶ್ರೀ ವೈ.ಆರ್. ಕಾಂತರಾಜೇಂದ್ರ, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಅವರು ನೋಡಲ್ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾರೆ. ಅವರ ದೂರವಾಣಿ ಸಂಖ್ಯೆ : 22211246 (ಕಛೇರಿ) ಹಾಗೂ 23497479 (ನಿವಾಸ) ಆಗಿರುತ್ತದೆ. ಈ ಮೌಲ್ಯಮಾಪನ ಕಾರ್ಯವನ್ನು 3 ತಿಂಗಳ ಅವಧಿಯೊಳಗೆ ಪೂರ್ಣಗೊಳಿಸುವುದು.

ಮೌಲ್ಯಮಾಪನ ಸಂಸ್ಥೆಯ ಅಧಿಕಾರಿಗಳು ಭೇಟಿ ನೀಡಿದಾಗ ಅವರಿಗೆ ಎಲ್ಲ ಮಾಹಿತಿಗಳನ್ನು ನೀಡಿ ಸಹಕರಿಸತಕ್ಕದ್ದು.

ಈ ಆದೇಶವನ್ನು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಪಿಡಿ 39 ಇಪಿಎನ್ 10, ದಿನಾಂಕ : 09–12–2010ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

ಪಿ.ಆರ್. 109

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ದುಡಿಯುವ ಬಂಡವಾಳವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :
1. ದಿನಾಂಕ 31–05–2010ರ ಸಂಖ್ಯೆ : ವಾಕೈ 87 ಸಸಕಾ 2008 (ಭಾಗ)ನೇ ಸಂಖ್ಯೆಯ ಸರ್ಕಾರದ ಆದೇಶ.
2. ದಿನಾಂಕ 26–06–2010ರ ಸಂಖ್ಯೆ : ವಾಕೈ 87 ಸಸಕಾ 2008 (ಭಾಗ)ನೇ ಸಂಖ್ಯೆಯ ಸರ್ಕಾರದ ಆದೇಶ.
3. ದಿನಾಂಕ 09–09–2010ರ ಸಂಖ್ಯೆ : ವಾಕೈ 78 ಸಸಕಾ 2010ನೇ ಸಂಖ್ಯೆಯ ಸರ್ಕಾರದ ಆದೇಶ.
4. ದಿನಾಂಕ 21–10–2010ರ ಸಂಖ್ಯೆ : ವಾಕೈ 78 ಸಸಕಾ 2010ನೇ ಸಂಖ್ಯೆಯ ಸರ್ಕಾರದ ಆದೇಶ.
5. ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರ ದಿನಾಂಕ : 04–12–2010ರ ಪತ್ರ.

**ಪ್ರಸ್ತಾವನೆ :**

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಕಾರ್ಯ ನಿರ್ವಹಣೆಯನ್ನು (Operation and Management) ಮಂಡ್ಯದ ದಿ ಮೈಸೂರು ಶುಗರ್ ಕಂಪನಿ ಲಿಮಿಟೆಡ್‌ಗೆ ಮೂರು (3) ವರ್ಷಗಳ ಅವಧಿಗೆ ವಹಿಸಿರುವ ಹಿನ್ನೆಲೆಯಲ್ಲಿ ಕಾರ್ಖಾನೆಯನ್ನು 2010ನೇ ಜೂನ್ ತಿಂಗಳಿಂದ ಪ್ರಾರಂಭಿಸುವ ಸಲುವಾಗಿ ಉಲ್ಲೇಖ (2), (3) ಮತ್ತು (4)ರ ಆದೇಶಗಳ ಮೂಲಕ ಈವರೆವಿಗೆ ಒಟ್ಟು ರೂ. 15.00 ಕೋಟಿಗಳ ದುಡಿಯುವ ಬಂಡವಾಳವನ್ನು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಮಂಜೂರು ಮಾಡಲಾಗಿರುತ್ತದೆ.

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ದಿನಾಂಕ : 04–12–2010 ರಂದು ಮಾನ್ಯ ಮುಖ್ಯಮಂತ್ರಿಯವರಿಗೆ ಪತ್ರ ಬರೆದು ಈ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣವನ್ನು ಪಾವತಿಸುವ ಸಲುವಾಗಿ 10.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 78 ಸಸಕಾ 2010, ಬೆಂಗಳೂರು, ದಿನಾಂಕ: 20–12–2010**

ಪ್ರಸ್ತಾವನೆಯಲ್ಲಿನ ವಿವರಣೆಗಳ ಹಿನ್ನೆಲೆಯಲ್ಲಿ, ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಹೆಚ್ಚುವರಿ ದುಡಿಯುವ ಬಂಡವಾಳವಾಗಿ 2010–2011ನೇ ಸಾಲಿನ ಪೂರಕ ಅಂದಾಜು ಪಟ್ಟಿಯಲ್ಲಿ ಒದಗಿಸಿರುವ ಮೊತ್ತದಿಂದ ರೂ. 10.00 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ), ಸರ್ಕಾರವು ಬಿಡುಗಡೆ ಮಾಡಿದೆ. ಈ ಮೊತ್ತವನ್ನು ಕಾರ್ಖಾನೆಯು 31–03–2011 ರೊಳಗೆ ಸರ್ಕಾರಕ್ಕೆ ಹಿಂದಿರುಗಿಸತಕ್ಕದ್ದು.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ **"6860-04-101-0-10-394 (ಯೋಜನೆ)"** ಇದರಡಿಯಲ್ಲಿ ಭರಿಸತಕ್ಕದ್ದು.

ಕಾರ್ಖಾನೆಯ Sugar Recovery ಈವರೆವಿಗೆ ಶೇಕಡ 8 ಕ್ಕಿಂತ ಕಡಿಮೆಯಿರುವುದರಿಂದ ಇದನ್ನು ಹೆಚ್ಚಿಸಲು ಕಾರ್ಖಾನೆಯು ಕ್ರಮ ಕೈಗೊಳ್ಳತಕ್ಕದ್ದು.

ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಕಛೇರಿಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು ಹಣ ಸಂದಾಯ ಸ್ವೀಕೃತಿಯ ಮೇಲೆ ಕಬ್ಬು ಅಭಿವೃದ್ಧಿ ಆಯುಕ್ತರ ಮೇಲು ರುಜುವಿನೊಂದಿಗೆ ಈ ಹಣವನ್ನು ಖಜಾನೆಯಿಂದ ಪಡೆದು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ : 16–12–2010ರ ಆಇ 174 ಬಿಆರ್‌ಎಸ್ 2010ರ ಆದೇಶ ಮತ್ತು ದಿನಾಂಕ 16–12–2010ರ ಆಇ/470/ವೆಚ್ಚ–2/2010ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿ ಮೂಲಕ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ
(ಸಹಕಾರಿ ಸಕ್ಕರೆ)

ಪಿ.ಆರ್. 110

## COMMERCE AND INDUSTRIES SECRETARIAT

**Sub :-** Change of location for the project proposal of M/s Narth Karnataka Power Pvt. Ltd., at Yadgir District, Karnataka.

**Read :-** 1. G.O. No. CI 115 SPI 2008, dated : 19-05-2008.
2. G.O. No. CI 175 SPI 2008, dated : 08-12-2009.

**Preamble:**

M/s Narth Karnataka Power Pvt. Ltd., (earlier known as M/s Jewargi Power Pvt. Ltd.,) had proposed to establish a 2x660 MW Coal based Power Plant at Kattisangavi & Madri Villages of Jewargi Taluk, Gulbarga District with an investment of Rs. 6757.84 crores, generating employment to 1070 persons.

The proposal was approved by the 13th State High Level Clearance Committee (SHLCC) Meeting held on 13-03-2008, In the said G.O. read at (1) above, the project will come up in 1800 acres of land at different Sy.No. of Kattisangavi and Madri Villages of Jewargi Taluk, Gulbarga District, which was to be acquired by KIADB.

The company has now identified an alternative land at Killenkere, Neelhalli, Kalebelgondi Villages of Yadgir Taluk at Sy. Nos. as appended to this G.O. for establishment of 2x660 MW Coal Based Power Plant. The land will be purchased by the company from the farmers directly, partly and KIADB to acquire land partly.

The proposal has been examined in detail.

Hence the following Order.

**Government Order No. CI 175 SPI 2008, Bangalore, dated : 20-12-2010**

In the circumstances explained above, the Government is pleased to accord approval for change of location from Kattisangavi & Madri Villages of Jewargi Taluk, Gulbarga District to Killenkere, Neelhalli, Kalebelgondi Villages of Yadgir Taluk and District for establishment of 2x660 MW Coal based Power Plant by M/s Narth Karnataka Power Pvt. Ltd., as approved by Govt. vide G.O. (1) and (2) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce and Industries Department

P.R. No. 111

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಪ್ರಸ್ತುತ ನಿವೃತ್ತರು ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಡಿಇ 2005 ದಿನಾಂಕ 9–3–2007.
(2) ವಿಚಾರಣಾಧಿಕಾರಿಯಾದ ಶ್ರೀ ಟಿ.ಎಸ್. ಪಾಲನೇತ್ರ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರು ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 9–11–2008.
(3) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಡಿಇ 2005 ದಿನಾಂಕ 7–1–2009.
(4) ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 64 ಎಡಿಇ 2005 ದಿನಾಂಕ: 27–1–2009.
(5) ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಪ್ರಸ್ತುತ ನಿವೃತ್ತರು ಸಲ್ಲಿಸಿರುವ ದಿನಾಂಕ: 2–3–2009ರ ಲಿಖಿತ ಹೇಳಿಕೆ.
(6) ಸರ್ಕಾರದ ಪತ್ರ ಸಂಖ್ಯೆ: ಕಂಇ 64 ಎಡಿಇ 2005 ದಿನಾಂಕ: 3–4–2009.
(7) ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ಪತ್ರ ಸಂಖ್ಯೆ: ಆರ್‌ಆರ್‌ಟಿ/ಸಿಆರ್/24/2008–09 ದಿನಾಂಕ: 3–4–2009.
(8) ಸರ್ಕಾರದ ಪತ್ರ ಸಂಖ್ಯೆ: ಕಂಇ 64 ಎಡಿಇ 2005 ದಿನಾಂಕ: 25–4–2009.
(9) ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆರವರ ಪತ್ರ ಸಂಖ್ಯೆ: ಸಿಸಿಎ(3)ಸಿಆರ್/72/2001–02 ದಿನಾಂಕ: 28–10–2009.
(10) ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ಪತ್ರ ಸಂಖ್ಯೆ: ಸಿಸಿಎ/ಸಿಆರ್/10/2009–10 ದಿನಾಂಕ: 27–1–2010 ಮತ್ತು ದಿನಾಂಕ: 12–3–2010.

**ಪ್ರಸ್ತಾವನೆ :**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೋಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 40 ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ (1) ಆರ್. ಸುರೇಶ್ ಬಿನ್ ಹೆಚ್. ರಮೇಶ್ (2) ಎಂ. ಮಂಜುನಾಥ ಬಿನ್ ಮಹಲಿಂಗಪ್ಪ (3) ಎಂ.ಎಸ್. ರಾಜೇಶ್ವರಿ ಬಿನ್ ಎಂ.ಎಸ್. ಶಿವರಾಮಯ್ಯ ಇವರಿಗೆ ತಲಾ 4–00 ಎಕರೆಯಂತೆ ಒಟ್ಟು 12.00 ಎಕರೆ ವಿಸ್ತೀರ್ಣವನ್ನು ನಮೂನೆ–53 ರಲ್ಲಿ ಅರ್ಜಿ ಸ್ವೀಕರಿಸಿ ನಿಯಮಬಾಹಿರವಾಗಿ ಮಂಜೂರು ಮಾಡಿ ಭೂ ಕಂದಾಯ ನಿಯಮ 1964 ರ ನಿಯಮ 108(ಸಿ), 108(ಡಿ) (i)(ii)(iii) ಉಲ್ಲಂಘನೆಯಾಗಿರುವುದಾಗಿ ಈ ಪ್ರಕರಣದಲ್ಲಿ ಈ ಕೆಳಕಂಡ ಅಧಿಕಾರಿ/ನೌಕರರು ಭಾಗಿಯಾಗಿದ್ದು, ಸದರಿಯವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ.&ಮೇ) ನಿಯಮಾವಳಿಗಳ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ದಿನಾಂಕ: 26–12–2005 ರಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

(1) ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು).
(2) ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ನಿವೃತ್ತ).
(3) ಶ್ರೀ ಗವೀಗೌಡ, ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ
(4) ಶ್ರೀ ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ,
(5) ಶ್ರೀ ಲಕ್ಷ್ಮೀನಾರಾಯಣ, ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ,
(6) ಶ್ರೀ ದೊಡ್ಡೇಗೌಡ, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರದ ದಿನಾಂಕ: 9–3–2007 ರ ಆದೇಶದಲ್ಲಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೋಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 40 ರ ಸರ್ಕಾರಿ ಭೂಮಿಯಲ್ಲಿ 12.00 ಎಕರೆ ವಿಸ್ತೀರ್ಣವನ್ನು ಅಕ್ರಮವಾಗಿ ಮಂಜೂರು ಮಾಡಿರುವ ಆಪಾದನೆಗೆ ಸಂಬಂಧಿಸಿದಂತೆ, ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಇವರನ್ನು ಇವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿ ಉದ್ದೇಶಿತ ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಈ ಪ್ರಕರಣದಲ್ಲಿ ಆರೋಪಿತರಾಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಇಲಾಖಾ ವಿಚಾರಣೆ ಮಾಡಿ ಸತ್ಯಾಸತ್ಯತೆಯನ್ನು ತಿಳಿಯುವುದು ಸೂಕ್ತ ಎಂದು ಸರ್ಕಾರವು ತೀರ್ಮಾನಿಸಿ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, 1957 ರ ಕರ್ನಾಟಕ ನಾಗರೀಕ ಸೇವಾ (ವ.ನಿ.&ಮೇ) ನಿಯಮಾವಳಿಯ ನಿಯಮ 13 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಯಲಹಂಕ ಟೌನ್, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಮತ್ತು ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಪ್ರಕರಣದ ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ.

(1) ಶ್ರೀ ವಿ. ನಾರಾಯಣಸ್ವಾಮಿ ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ನಿವೃತ್ತ).

(2) ಶ್ರೀ ಗವೀಗೌಡ, ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ

(3) ಶ್ರೀ ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ

(4) ಶ್ರೀ ಲಕ್ಷ್ಮೀನಾರಾಯಣ, ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ

(5) ಶ್ರೀ ದೊಡ್ಡೇಗೌಡ, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು

ಸರ್ಕಾರದ ಆದೇಶದಂತೆ, ವಿಚಾರಣಾಧಿಕಾರಿಗಳು ಕೂಲಂಕಷವಾಗಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ದಿನಾಂಕ: 9/20–11–2008 ರಂದು ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಆರೋಪಿತ ಅಧಿಕಾರಿಗಳಾದ (1) ಶ್ರೀ ಗವಿಗೌಡ (2) ಎಸ್.ವಿ. ಸತ್ಯನಾರಾಯಣ (3) ಲಕ್ಷ್ಮೀನಾರಾಯಣ ಮತ್ತು (4) ಶ್ರೀ ದೊಡ್ಡೇಗೌಡ ರವರುಗಳ ಮೇಲೆ ಹೊರಿಸಿರುವ ಆರೋಪಗಳು ಸಾಬೀತಾಗಿರುವುದಿಲ್ಲ (not proved) ಮತ್ತು ಆರೋಪಿತ ಅಧಿಕಾರಿಗಳಾದ ಶ್ರೀ ನಾರಾಯಣಸ್ವಾಮಿ ಮೇಲೆ ಹೊರಿಸಿರುವ ಆರೋಪಗಳನ್ನು ಫಿರ್ಯಾದುದಾರರು ಸಮರ್ಪಕವಾಗಿ ಸಾಬೀತು ಪಡಿಸಿರುತ್ತಾರೆ (proved) ಎಂದು ಅಂತಿಮವಾಗಿ ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳಾದ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 9/20–11–2008 ರ ವಿಚಾರಣಾ ವರದಿಯನ್ನು ಒಪ್ಪಿ, ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 7–1–2009 ರ ಸರ್ಕಾರದ ಆದೇಶದಲ್ಲಿ, (1) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು (2) ಶ್ರೀ ವಿ. ಗವೀಗೌಡ, ಹಿಂದಿನ ರಾಜಸ್ವ ನಿರೀಕ್ಷಕರು (ಪ್ರಸ್ತುತ ನಿವೃತ್ತರು), ಬೆಂಗಳೂರು ಉತ್ತರ (ಅಪರ) ತಾಲ್ಲೂಕು (3) ಶ್ರೀ ಲಕ್ಷ್ಮೀನಾರಾಯಣ, ಹಿಂದಿನ ಗ್ರಾಮ ಲೆಕ್ಕಿಗರು, ತಾಲ್ಲೂಕು ಕಛೇರಿ, ಆನೇಕಲ್ (ಪ್ರಸ್ತುತ ಗ್ರಾಮಲೆಕ್ಕಿಗರು, ಬೆಂಗಳೂರು ಉತ್ತರ ತಾಲ್ಲೂಕು) (4) ಶ್ರೀ ಹೆಚ್.ವಿ. ಸತ್ಯನಾರಾಯಣ, ಹಿಂದಿನ ಗ್ರಾಮಲೆಕ್ಕಿಗರು, ಕೆ. ಗೊಲ್ಲಹಳ್ಳಿ (ಪ್ರಸ್ತುತ ಗ್ರಾಮಲೆಕ್ಕಿಗರು, ಆನೇಕಲ್ ತಾಲ್ಲೂಕು) ಇವರುಗಳನ್ನು ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 64 ಎಡಿಇ 2005 ದಿನಾಂಕ: 28–12–2005 ರಲ್ಲಿ ಹೊರಿಸಲಾದ ಆಪಾದನೆಯಿಂದ ಸರ್ಕಾರವು ದೋಷಮುಕ್ತಗೊಳಿಸಿ ಆದೇಶಿಸಿದೆ ಹಾಗೂ ಶ್ರೀ ನಾರಾಯಣಸ್ವಾಮಿ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಹೊರಿಸಲಾದ ಆಪಾದನೆ ಸಾಬೀತಾಗಿರುವುದರಿಂದ ಇವರಿಗೆ ಕೆ.ಸಿ.ಎಸ್.ಆರ್ ನಿಯಮ 214ರಲ್ಲಿ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತದೆ ಎಂದು ಆದೇಶಿಸಲಾಗಿರುತ್ತದೆ.

ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ಆರೋಪಿತ ಅಧಿಕಾರಿಯಾದ ಶ್ರೀ ನಾರಾಯಣಸ್ವಾಮಿ ಇವರಿಗೆ ಕಳುಹಿಸಿ, ವಿಚಾರಣಾ ಪ್ರಾಧಿಕಾರಿಯ ನಿರ್ಣಯಗಳ ಬಗ್ಗೆ ಸಮಜಾಯಿಷಿ ಏನಾದರೂ ಇದ್ದರೆ, ನೋಟೀಸು ತಲುಪಿದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಗೆ ಸಲ್ಲಿಸುವುದು, ನಿಗದಿತ ಅವಧಿಯಲ್ಲಿ ಸಮಜಾಯಿಷಿ ಬಾರದಿದ್ದಲ್ಲಿ, ಹೇಳುವುದು ಏನೂ ಇಲ್ಲವೆಂದು ಭಾವಿಸಿ, ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸುವ ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸನ್ನು ದಿನಾಂಕ: 27–1–2009 ರಂದು ಜಾರಿ ಮಾಡಲಾಗಿರುತ್ತದೆ.

ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಆರೋಪಿತ ನೌಕರರಾದ ಶ್ರೀ ನಾರಾಯಣಸ್ವಾಮಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ: (5) ದಿನಾಂಕ: 2–3–2009 ರಂದು ಸರ್ಕಾರಕ್ಕೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯಲ್ಲಿ, ಪ್ರಕರಣಕ್ಕೆ ಸಂಬಂಧಿಸಿದಂತೆ, ಉಳಿದ ನಾಲ್ಕು ನೌಕರರುಗಳನ್ನು ಆರೋಪದಿಂದ ದೋಷಮುಕ್ತಗೊಳಿಸಿರುವುದರಿಂದ ತಮ್ಮ ವಿರುದ್ಧದ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿರುವುದು ನಿಯಮಬಾಹಿರವಾಗಿದ್ದು, ಉಳಿದವರಂತೆ ತಮ್ಮನ್ನು ಸಹ ಆರೋಪದಿಂದ ದೋಷಮುಕ್ತಗೊಳಿಸಿ ಆದೇಶ ಹೊರಡಿಸುವಂತೆ ಕೋರುತ್ತಾ, ದಿನಾಂಕ: 31–12–2005 ರಂದು ವಯೋ ನಿವೃತ್ತರಾಗಿದ್ದು, ನಿಯಮಾನುಸಾರ ಕರ್ತವ್ಯ ನಿರ್ವಹಿಸಿದ್ದು, ಪ್ರಕರಣದಲ್ಲಿ ಒಳಗೊಂಡಿರುವ ಜಮೀನು ಸರ್ಕಾರದ ಸ್ವಾಧೀನಕ್ಕೆ ಬಂದಿರುತ್ತದೆಯಾದ್ದರಿಂದ, ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಆರೋಪಿತ ನೌಕರರಾದ ಶ್ರೀ ನಾರಾಯಣಸ್ವಾಮಿ ರವರು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ, ಆರೋಪದಲ್ಲಿರುವ ಜಮೀನನ್ನು ಸರ್ಕಾರವು ಸ್ವಾಧೀನಕ್ಕೆ ತೆಗೆದುಕೊಂಡಿದ್ದು, ಸರ್ಕಾರಕ್ಕೆ ಯಾವುದೇ ರೀತಿಯ ನಷ್ಟ ಉಂಟಾಗಿರುವುದಿಲ್ಲವೆಂದು ಮತ್ತು ಈ ವಿಷಯವು ಅಪೀಲು ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ, ಮೇಲ್ಕಂಡ ಜಮೀನು ಸರ್ಕಾರದ ವಶದಲ್ಲಿರುವ ಬಗ್ಗೆ ಕೂಡಲೇ ವರದಿ ಸಲ್ಲಿಸುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ: (6) ರ ದಿನಾಂಕ: 3–4–2009 ರ ಪತ್ರದಲ್ಲಿ ತಹಶೀಲ್ದಾರ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರನ್ನು ಕೋರಲಾಗಿತ್ತು.

ಅದರಂತೆ ತಹಶೀಲ್ದಾರ್ ರವರು ಮೇಲೆ ಓದಲಾದ ಕ್ರಮ ಸಂಖ್ಯೆ: (7) ರ ದಿನಾಂಕ: 3–4–2009 ರ ಪತ್ರದಲ್ಲಿ, ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕುಂಬಳಗೋಡು, ಗೊಲ್ಲಹಳ್ಳಿ, ಗ್ರಾಮದ ಸರ್ವೆ ನಂ. 40 ರಲ್ಲಿ 12–00 ಎಕರೆ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿರುವುದನ್ನು ಬೆಂಗಳೂರು ದಕ್ಷಿಣ ಉಪ ವಿಭಾಗಾಧಿಕಾರಿಯವರ ಆದೇಶ ಸಂಖ್ಯೆ: ಆರ್‌ಎ/5/2005–06 ದಿನಾಂಕ: 27–6–2007 ರ ಅನ್ವಯ ಎಂ.ಆರ್.ನಂ. 2/2007 ರಂತೆ ಸರ್ಕಾರಕ್ಕೆ ಪಡೆದುಕೊಂಡ ಪಹಣಿಯಲ್ಲಿ ಕಾಲಂ ನಂ. 9 ರಲ್ಲಿ ಸರ್ಕಾರ ಎಂದು ದಾಖಲಾತಿಯಾಗಿದ್ದು, ಈಗಿನ ವಸ್ತುಸ್ಥಿತಿಯಂತೆ ಇದು ಸರ್ಕಾರದ ಸ್ವಾಧೀನದಲ್ಲಿರುವ ಸರ್ಕಾರಿ ಜಮೀನಾಗಿರುತ್ತದೆ ಎಂಬ ಅಂಶವನ್ನು ಸರ್ಕಾರದ ಗಮನಕ್ಕೆ ತಹಶೀಲ್ದಾರರ್‌ರವರು ತಂದಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (8) ರ ದಿನಾಂಕ: 25–4–2009ರ ಸರ್ಕಾರದ ಪತ್ರದಲ್ಲಿ, ಪ್ರಸ್ತುತ ಜಮೀನು ಈಗಿನ ವಸ್ತುಸ್ಥಿತಿಯಂತೆ ಇದು ಸರ್ಕಾರದ ಸ್ವಾಧೀನದಲ್ಲಿರುವ ಬಗ್ಗೆ ಸ್ಥಳ ಪರಿಶೀಲನೆ ಮಾಡಿ ಮೇಲ್ಕಂಡ ಜಮೀನು ಸರ್ಕಾರದ ವಶದಲ್ಲಿರುವ ಬಗ್ಗೆ ದೃಢೀಕರಿಸಿ ವರದಿ ಸಲ್ಲಿಸುವಂತೆ ಕೋರಿ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರುರವರಿಗೆ ಪತ್ರ ಬರೆಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (9) ರ ದಿನಾಂಕ: 28–10–2009 ರ ಅಪರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಪತ್ರದಲ್ಲಿ, ತಹಶೀಲ್ದಾರ್ ಬೆಂಗಳೂರು ದಕ್ಷಿಣ ತಾಲ್ಲೂಕುರವರಿಂದ ವರದಿ ಪಡೆಯಲಾಗಿದ್ದು, ಸದರಿ ವರದಿಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕುಂಬಳಗೋಡು, ಗೊಲ್ಲಹಳ್ಳಿ, ಗ್ರಾಮದ ಸರ್ವೆ ನಂ. 40 ರಲ್ಲಿ 12–00 ಎಕರೆ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿದ್ದು, ಬೆಂಗಳೂರು ದಕ್ಷಿಣ ಉಪ

ವಿಭಾಗಾಧಿಕಾರಿಗಳ ಆದೇಶ ಸಂಖ್ಯೆ: ಆರ್‌ಎ 3/2005–06 ದಿನಾಂಕ: 12–6–2007 ರಂತೆ ಎಂಆರ್ 2/2007–08 ರಂತೆ ಸರ್ಕಾರಕ್ಕೆ ಪಡೆದುಕೊಂಡಿದ್ದು ಸರ್ಕಾರಿ ಜಮೀನನ್ನು ಸುಬರ್ದು ಪಡೆದುಕೊಂಡಿರುವುದು ದಾಖಲೆಗಳಿಂದ ತಿಳಿದು ಬಂದಿದ್ದು, ಅದಕ್ಕೆ ಸಂಬಂಧಿಸಿದ ರಾಜಸ್ವ ನಿರೀಕ್ಷಕರ ವರದಿ ಮಹಜರ್ ಹಾಗೂ ಪಹಣಿಗಳ ಪ್ರತಿಗಳನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

ಓದಲಾದ ಕ್ರಮ ಸಂಖ್ಯೆ: (10) ರ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ದಿನಾಂಕ: 27–1–2010 ಮತ್ತು 12–3–2010 ರ ಪತ್ರಗಳಲ್ಲಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ ಕುಂಬಳಗೋಡು ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 40 ರಲ್ಲಿ 12–00 ಎಕರೆ ಜಮೀನಿನ ಸ್ಥಳ ಪರಿಶೀಲನೆ ಮಾಡಿದ್ದು, ರಾಜಸ್ವ ನಿರೀಕ್ಷಕರು ನೀಡಿರುವ ವರದಿಯಲ್ಲಿ, ಕುಂಬಳಗೋಡು ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 40 ಕ್ಕೆ ಭೇಟಿ ನೀಡಿ ಈ ಹಿಂದೆ ಜಿಲ್ಲಾಧಿಕಾರಿಗಳ ದಿನಾಂಕ: 1–9–2006 ರ ಆದೇಶದಂತೆ ಅಳತೆ ಮಾಡಿ ತಯಾರಿಸಿರುವ ನಕ್ಷೆಯಂತೆ ಪರಿಶೀಲಿಸಲಾಗಿದ್ದು, ಕುಂಬಳಗೋಡು ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ. 40 ರಲ್ಲಿ ಗುರುತಿಸಿರುವ ಈ ಹಿಂದೆ ಮಂಜೂರಿಯಾಗಿದ್ದ ಬ್ಲಾಕ್ ನಂ. 15 ರಲ್ಲಿ ಎಂ. ಮಂಜುನಾಥ್ ಸನ್ ಆಫ್ ಮಹಾಲಿಂಗಪ್ಪ ರವರಿಗೆ 4–00 ಎಕರೆ ಮಂಜೂರು ಅನುಭವದಂತೆ 1–25 ಎ.ಗು ಬ್ಲಾಕ್ ನಂ. 16 ರಲ್ಲಿ ಆರ್. ಸುರೇಶ್ ಸನ್ ಆಫ್ ಹೆಚ್. ರಮೇಶ್ ರವರಿಗೆ 4–00 ಎಕರೆ ಮಂಜೂರಿ ಅನುಭವದಂತೆ 1–25 ಎ.ಗು ಬ್ಲಾಕ್ ನಂ. 17 ರಲ್ಲಿ ಎಂ.ಎಸ್. ರಾಜೇಶ್ವರಿ ಸನ್ ಆಫ್ ಶಿವರಾಮಯ್ಯ ರವರಿಗೆ 4–00 ಎಕರೆ ಮಂಜೂರಿ ಅನುಭವದಂತೆ 1.20 ಎ.ಗು ಜಮೀನಿನಲ್ಲಿ ಸದರಿಯವರುಗಳು ಅನುಭವದಲ್ಲಿರುತ್ತಾರೆಂದು ನಕ್ಷೆಯಲ್ಲಿ ತೋರಿಸಿರುತ್ತಾರೆ. ಹಾಲಿ ತಾಲ್ಲೂಕು ಮೋಜಣಿದಾರರೊಂದಿಗೆ ಮೇಲ್ಕಂಡ ಜಮೀನು ಪರಿಶೀಲಿಸಿ ಅಳತೆ ಮಾಡಿದಾಗ ಬ್ಲಾಕ್ ನಂ. 15, 16 ಮತ್ತು 17 ರ ಬ್ಲಾಕ್‌ಗಳಲ್ಲಿ ಮೇಲ್ಕಂಡವರುಗಳು ಅನುಭವದಲ್ಲಿರುವುದಿಲ್ಲವೆಂದು ಕಂಡು ಬಂದಿದ್ದು, ವಾಸ್ತವಿಕವಾಗಿ ಎಲ್. ನಾಗಪ್ಪ, ಟಿ. ಲಿಂಗಪ್ಪ, ಮಲ್ಲಯ್ಯ, ಮೈಲಾರಪ್ಪ ನಾಗರಾಜ್‌ರವರುಗಳಿಗೆ ಜಂಟಿಯಾಗಿ 1–13 ಎ.ಗು. ವೆಂಕಟೇಶ್ ಸನ್ ಆಫ್ ಲಿಂಗಪ್ಪ 1–13 ಎ.ಗು ಜಮೀನಿನಲ್ಲಿ ಅನುಭವದಲ್ಲಿರುತ್ತಾರೆಂದು ನಕ್ಷೆಯಲ್ಲಿ ತೋರಿಸಿದ್ದು ನಕ್ಷೆಯಲ್ಲಿ ಸದರಿ ಬ್ಲಾಕ್‌ಗಳಿಗೆ ಹಳದಿ ಬಣ್ಣದಿಂದ ಗುರುತಿಸಲಾಗಿದೆ. ಮೇಲ್ಕಂಡವರುಗಳು 12–00 ಎಕರೆ ಜಮೀನಿನಲ್ಲಿ ಅನುಭವದಲ್ಲಿರುವುದು ಕಂಡು ಬಂದಿಲ್ಲವೆಂದು ಮೋಜಣಿದಾರರು ಅಳತೆಯಿಂದ ಮತ್ತು ನಕ್ಷೆಯಿಂದ ಕಂಡು ಬಂದಿರುತ್ತದೆ ಎಂದು ವರದಿ ನೀಡಿದ್ದು, ಮೋಜಣಿದಾರರ ಸ್ಕೆಚ್ ಹಾಗೂ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗದವರು 12–00 ಎಕರೆ ಜಮೀನನ್ನು ಸರ್ಕಾರ ಎಂದು ಆದೇಶ ಮಾಡಲಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಶ್ರೀ ವಿ. ನಾರಾಯಣಸ್ವಾಮಿರವರು ನಿವೃತ್ತಿ ಹೊಂದಿದ್ದು, ಜಮೀನು ಮಂಜೂರಾತಿದಾರರ ವಶದಲ್ಲಿ ಇಲ್ಲದಿರುವುದರಿಂದ ಸದರಿಯವರ ವಿರುದ್ಧ ಮಾಡಿರುವ ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 64 ಎಡಿಇ 2005 ಬೆಂಗಳೂರು, ದಿನಾಂಕ 14–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದನೆಗಳು ಸಾಬೀತಾಗಿಲ್ಲದ ಕಾರಣ ಇವರ ವಿರುದ್ಧದ ಆರೋಪಗಳನ್ನು ಕೈಬಿಟ್ಟು ದೋಷಮುಕ್ತಗೊಳಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 112

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್ ಇವರ ಅಮಾನತ್ತನ್ನು ತೆರವುಗೊಳಿಸಿ ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ :**(1) ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಎಡಿಇ 2009 ದಿನಾಂಕ 21–5–2009.

(2) ಜಿಲ್ಲಾಧಿಕಾರಿಗಳು, ಬಿಜಾಪುರ ಇವರ ಪತ್ರ ಸಂಖ್ಯೆ: ಕಂ/ಸಿಬ್ಬಂದಿ/2/ವಿವ/13/2008–09 ದಿನಾಂಕ: 2–7–2009.

(3) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 04 ಎಡಿಇ 2009 ದಿನಾಂಕ : 28–10–2009.

(4) ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಎಡಿಇ 2009 ದಿನಾಂಕ 20–10–2010.

(5) ಶ್ರೀಮತಿ ನಾಗವೇಣಿ ಕೋಂ. ಶಿವಪ್ಪ ಬಿ.ಹೆಚ್. ವಿಶೇಷ ತಹಶೀಲ್ದಾರ್(ಹಾಲಿ ಅಮಾನತ್ತು) ಇವರ ದಿನಾಂಕ: 6–9–2010ರ ಮನವಿ.

**ಪ್ರಸ್ತಾವನೆ :**

ಶ್ರೀ ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರು ದಿನಾಂಕ: 1–7–2008 ರಿಂದ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕೂಡಲೇ ಜಾರಿಗೆ ಬರುವಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮಾವಳಿಯ ನಿಯಮ 10(1)(ಡಿ) ರನ್ವಯ, ಸೇವೆಯಿಂದ ಅಮಾನತ್ತುಗೊಳಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಆದೇಶದಲ್ಲಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಜಿಲ್ಲಾಧಿಕಾರಿಗಳು, ಬಿಜಾಪುರ ರವರು ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಕುರಿತಂತೆ, ಕರಡು ದೋಷಾರೋಪಣ ಪಟ್ಟಿಯನ್ನು (ಅನುಬಂಧ 1 ರಿಂದ 4) ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಸರ್ಕಾರವು ಬಿ.ಹೆಚ್. ಶಿವಪ್ಪ, ವಿಶೇಷ ತಹಶೀಲ್ದಾರ್, ಬಬಲೇಶ್ವರ, ವಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ, ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ (ವ.ನಿ&ಮೇ) ನಿಯಮ 1957 ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಸರ್ಕಾರದಿಂದ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿಗೆ ಆಪಾದಿತರು ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲವಾದ್ದರಿಂದ, ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಸರ್ಕಾರದ ದಿನಾಂಕ: 20–10–2010 ರ ಆದೇಶದಲ್ಲಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಬಿ.ಹೆಚ್. ಶಿವಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬಬಲೇಶ್ವರ (ಹಾಲಿ ಅಮಾನತ್ತು) ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹೆಚ್ಚುವರಿ ಜಿಲ್ಲಾಧಿಕಾರಿಗಳು, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ

ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಶಿರಸ್ತೇದಾರ್ (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಲ್ಲಿ, ಶ್ರೀಮತಿ ನಾಗವೇಣಿ ಕೋಂ. ಶಿವಪ್ಪ ಬಿ.ಹೆಚ್. ವಿಶೇಷ ತಹಶೀಲ್ದಾರ್ (ಹಾಲಿ ಅಮಾನತ್ತು) ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ತಮ್ಮ ಪತಿಯವರು ಸರ್ಕಾರಿ ಸೇವೆಯಲ್ಲಿ 33 ವರ್ಷಗಳ ಸೇವೆ ಸಲ್ಲಿಸಿದ್ದು, ಶಾರೀರಿಕವಾಗಿ ಖಾಯಿಲೆಯಿಂದ ಬಳಲುತ್ತಿದ್ದು, ಔಷಧಿ ಮಾತ್ರೆಗಳು ಅತ್ಯಾವಶ್ಯಕವಾಗಿದ್ದು, ತಮ್ಮ ಕುಟುಂಬ ಗಂಭೀರ ಸ್ಥಿತಿಯಲ್ಲಿದ್ದು, ಶ್ರೀಯುತ ಬಿ.ಹೆಚ್. ಶಿವಪ್ಪ ಇವರಿಗೆ ಸೇವೆ ಸಲ್ಲಿಸಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ.

ಶ್ರೀ ಬಿ.ಹೆಚ್. ಶಿವಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬಬಲೇಶ್ವರ (ಹಾಲಿ ಅಮಾನತ್ತು) ಇವರು ದಿನಾಂಕ: 1–7–2008 ರಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದಕ್ಕೆ ಅವರನ್ನು ಅಮಾನತ್ತಿನಲ್ಲಿ ಇರಿಸಲಾಗಿತ್ತು. ಸದರಿ ಅಧಿಕಾರಿಗೆ ದಿನಾಂಕ: 29–11–2009 ರಂದು ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿದ್ದು, ಆಪಾದಿತರು ಇಲ್ಲಿಯವರೆಗೆ ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ. ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹೆಚ್ಚುವರಿ ಜಿಲ್ಲಾಧಿಕಾರಿಗಳು, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಅದೇ ಕಛೇರಿಯ ಶಿರಸ್ತೇದಾರ್ (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿದೆ. ಶ್ರೀ ಶಿವಪ್ಪ ಇವರನ್ನು ಅಮಾನತ್ತಿನಲ್ಲಿಟ್ಟು ಒಂದು ವರ್ಷದ ಮೇಲಾಗಿರುವುದರಿಂದ ಇವರ ಅಮಾನತ್ತನ್ನು ತೆರವುಗೊಳಿಸಿ ಚುನಾವಣಾ ತಹಶೀಲ್ದಾರ್, ಚಿಕ್ಕಬಳ್ಳಾಪುರ ಇಲ್ಲಿನ ಖಾಲಿ ಹುದ್ದೆಗೆ ನೇಮಿಸಲು ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಎಡಿಇ 2009 ಬೆಂಗಳೂರು, ದಿನಾಂಕ 16–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಹೆಚ್. ಶಿವಪ್ಪ, ತಹಶೀಲ್ದಾರ್ (ಪ್ರಸ್ತುತ ಅಮಾನತ್ತು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ ಇವರನ್ನು ಚುನಾವಣಾ ತಹಶೀಲ್ದಾರ್, ಚಿಕ್ಕಬಳ್ಳಾಪುರ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 113

## ಸಹಕಾರ ಸಚಿವಾಲಯ

**ವಿಷಯ :** ತ್ರಿಪಕ್ಷೀಯ ಒಪ್ಪಂದದಂತೆ ವಿಶೇಷ ಯೋಜನೆ ಸಾಲ ಪತ್ರಗಳಲ್ಲಿಯ ರಾಜ್ಯ ಸರ್ಕಾರದ ಪಾಲಿನ ಕೊಡುಗೆ ಹೊರಬಾಕಿ ರೂ. 48.52 ಕೋಟಿಯ ಮೇಲಿನ ದಂಡದ ಬಡ್ಡಿಯನ್ನು ಮನ್ನಾ ಮಾಡುವ ಕುರಿತು.

**ಓದಲಾಗಿದೆ :** 1. ಬ್ಯಾಂಕು, ರಾಜ್ಯ ಸರ್ಕಾರ ಮತ್ತು ನಬಾರ್ಡ್ ದಿನಾಂಕ : 31–8–2004 ರಂದು ಮಾಡಿಕೊಂಡಿರುವ ತ್ರಿಪಕ್ಷೀಯ ಒಪ್ಪಂದ.

**2.** ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಹಣಕಾಸು/ಸಾ.ಪ.–387/343/2010–11, ದಿನಾಂಕ:30–10–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಒಪ್ಪಂದದಲ್ಲಿ ರಾಜ್ಯ ಸರ್ಕಾರ, ನಬಾರ್ಡ್ ಮತ್ತು ಕಸ್ಕಾರ್ಡ್ ಬ್ಯಾಂಕುಗಳು ತ್ರಿಪಕ್ಷೀಯ ಒಪ್ಪಂದ ಮಾಡಿಕೊಂಡಿದ್ದು ಈ ಒಪ್ಪಂದದ ಅಂಶ 8ರ ಮೇರೆಗೆ ಕಸ್ಕಾರ್ಡ್ ಬ್ಯಾಂಕಿನ ಸಾಲಗಳನ್ನು ಷೇರು ಧನವನ್ನಾಗಿ ಪರಿವರ್ತಿಸಲು ರಾಜ್ಯ ಸರ್ಕಾರವು ಪರಿಶೀಲಿಸುವುದಾಗಿ ತಿಳಿಸಿರುತ್ತದೆ. ಅದರಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಸಾಲಪತ್ರ ಹೊರಬಾಕಿ ದಿನಾಂಕ : 31–3–2004ರ ಅಂತ್ಯಕ್ಕೆ ಇರುವ ರೂ. 48.52 ಕೋಟಿಗಳನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಿ ಕಂತುಗಳಲ್ಲಿ ಮರುಪಾವತಿಸಲು ಅನುಮೋದನೆಯನ್ನು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಶೀಲಿಸಿ ಈ ಹಿಂದಿನ ಅವಧಿಯಲ್ಲಿ ತಡವಾಗಿ ಪಾವತಿ ಮಾಡಿದ ಅಸಲು/ಬಡ್ಡಿ ಮೊತ್ತದ ಮೇಲಿನ ದಂಡದ ಬಡ್ಡಿ ರೂ. 3.14 ಕೋಟಿಗಳನ್ನು ಕಸ್ಕಾರ್ಡ್ ಬ್ಯಾಂಕು ನೀಡಬೇಕು. 2010–11 ರಿಂದ ಮರುನಿಗದಿಪಡಿಸಲಾದ ಕಂತುಗಳನ್ನು ಬಡ್ಡಿಯೊಂದಿಗೆ ನಿಯಮಿತವಾಗಿ ಪಾವತಿಸುವ ಬದ್ಧತೆಯೊಂದಿಗೆ ಮನ್ನಾ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 177 ಸಿಸಿಬಿ 2010, ಬೆಂಗಳೂರು, ದಿನಾಂಕ : 29–1–2011.**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ಕಸ್ಕಾರ್ಡ್ ಬ್ಯಾಂಕು 2010–11ನೇ ಸಾಲಿನಿಂದ ರಿಶೆಡ್ಯೂಲ್ ಮಾಡಿದ ಅಸಲು ಮೊತ್ತವನ್ನು ಬಡ್ಡಿಯೊಂದಿಗೆ ಪ್ರತಿ ಸಾಲಿನಲ್ಲಿ ನಿಯಮಿತವಾಗಿ ಪಾವತಿಸುವ ಬದ್ಧತೆಯೊಂದಿಗೆ ಈ ಹಿಂದಿನ ಅವಧಿಯಲ್ಲಿ ತಡವಾಗಿ ಪಾವತಿ ಮಾಡಿದ ಅಸಲು/ಬಡ್ಡಿ ಮೊತ್ತದ ಮೇಲಿನ ದಂಡದ ಬಡ್ಡಿ ರೂ. 3.14 ಕೋಟಿಗಳನ್ನು ಮನ್ನಾ ಮಾಡಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : 465/ವೆಚ್ಚ–2/2010, ದಿನಾಂಕ : 29–12–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ. ಆರ್. 379